WPP-47

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಮೇ ೨೪, ೨೦೧೨ (ಜ್ಯೇಷ್ಠ ೩, ಶಕ ವರ್ಷ ೧೯೩೪) | ಸಂಚಿಕೆ ೨೧ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :–** ರೈತ ಮಹಿಳೆಯರಿಗೆ ಉಂಟಾಗುವ ಗರ್ಭಕೋಶ ಕಾಯಿಲೆಗಳಿಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವ್ಯಾಪ್ತಿಯಡಿ ಬರುವ (ವೈದ್ಯಕೀಯ ಶಿಕ್ಷಣ ಇಲಾಖೆ ಸೇರಿದಂತೆ) ಸರ್ಕಾರಿ ಆಸ್ಪತ್ರೆ / ಕೇಂದ್ರಗಳಲ್ಲಿ ಉಚಿತ ಚಿಕಿತ್ಸೆ ನೀಡುವ ಬಗ್ಗೆ.

**ಓದಲಾಗಿದೆ :–**

1) ಮಾನ್ಯ ಮುಖ್ಯ ಮಂತ್ರಿಯವರು 2011–12 ನೇ ಸಾಲಿನ ಕೃಷಿ ಆಯವ್ಯಯ ಭಾಷಣದ ಕಂಡಿಕೆ 89 ರಲ್ಲಿ ಮಾಡಿರುವ ಘೋಷಣೆ.
2) ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ರವರ ಪತ್ರ ಸಂಖ್ಯೆ: ಪಿ.ಎಲ್.ಎನ್ (1)23/ 2011–12 ದಿನಾಂಕ: 27–02–2012.
3) ಅಪರ ಮುಖ್ಯ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ದಿನಾಂಕ: 20–3–2012 ರಂದು ನಡೆದ ಅಧಿಕಾರಯುಕ್ತ ಸಮಿತಿ ಸಭೆಯಲ್ಲಿ ತೆಗೆದುಕೊಂಡ ತೀರ್ಮಾನ.

**ಪ್ರಸ್ತಾವನೆ:**

ಮಾನ್ಯ ಮುಖ್ಯ ಮಂತ್ರಿಯವರು ಮೇಲೆ (1) ರಲ್ಲಿ ಓದಲಾದ 2011–12 ನೇ ಸಾಲಿನ ಕೃಷಿ ಆಯವ್ಯಯ ಭಾಷಣದ ಕಂಡಿಕೆ 89 ರಲ್ಲಿ ರೈತ ಮಹಿಳೆಯರಿಗೆ ಉಂಟಾಗುವ ಗರ್ಭಕೋಶ ಕಾಯಿಲೆಗಳಿಗೆ ಚಿಕಿತ್ಸೆ ವೆಚ್ಚವನ್ನು ಸರ್ಕಾರವು ಭರಿಸುವುದಾಗಿ ಘೋಷಿಸಿದ್ದಾರೆ.

ಮೇಲೆ (2) ರಲ್ಲಿ ಓದಲಾದ ಪತ್ರ ದಿನಾಂಕ: 27–2–2012 ರಂದು ಆಯುಕ್ತರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ರವರು ಈ ಬಗ್ಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿದ್ದಾರೆ. ರಾಜ್ಯದ ಒಟ್ಟಾರೆ ಜನಸಂಖ್ಯೆಯು 6.11 ಕೋಟಿಗಳಾಗಿದ್ದು, ಅದರಲ್ಲಿ 3.76 ಕೋಟಿ ಜನರು ಗ್ರಾಮಾಂತರ ಪ್ರದೇಶಗಳಲ್ಲಿ ಹಾಗು 2.35 ಕೋಟಿ ಜನರು ನಗರ ಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೆ. ಅದೇ ರೀತಿ ಗ್ರಾಮಾಂತರ ಪ್ರದೇಶಗಳಲ್ಲಿ 18.54 ಲಕ್ಷ ಮಹಿಳೆಯರು ಹಾಗು ನಗರ ಪ್ರದೇಶದಲ್ಲಿ 1.15 ಕೋಟಿ ಮಹಿಳೆಯರು ವಾಸಿಸುತ್ತಿದ್ದಾರೆ. ಕೃಷಿ ಇಲಾಖೆಯ ಅಂದಾಜಿನಂತೆ ರಾಜ್ಯದಲ್ಲಿ ಸುಮಾರು 75 ಲಕ್ಷ ರೈತ ಕುಟುಂಬಗಳಿವೆ. ಗರ್ಭಕೋಶಕ್ಕೆ ಸಂಬಂಧಿಸಿದ ಕಾಯಿಲೆಗಳನ್ನು ಎರಡು ವಿಭಾಗಗಲ್ಲಿ ಅಂದರೆ, (1) ವೈದ್ಯಕೀಯ ಪ್ರಕರಣಗಳು ಹಾಗು (2) ಶಸ್ತ್ರ ಚಿಕಿತ್ಸೆ ಪ್ರಕರಣಗಳೆಂದು ವಿಭಜಿಸಲಾಗಿದೆ. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವ್ಯಾಪ್ತಿಯಡಿ ಬರುವ ಎಲ್ಲಾ ಸರ್ಕಾರಿ ಆಸ್ಪತ್ರೆ / ಕೇಂದ್ರಗಳಲ್ಲಿ ಉಚಿತ ವೈದ್ಯಕೀಯ ಪರೀಕ್ಷೆ ಹಾಗು ಔಷಧಿಗಳನ್ನು ಒದಗಿಸಲಾಗುತ್ತಿದೆ. ಗರ್ಭಕೋಶ ಕಾಯಿಲೆಗಳ ಶಸ್ತ್ರ ಚಿಕಿತ್ಸೆಗೆ ಸಂಬಂಧಿಸಿದಂತೆ

ಪ್ರಾಥಮಿಕ ಆರೋಗ್ಯ ಕೇಂದ್ರದ ಮಟ್ಟದಲ್ಲಿ ಸಣ್ಣ ಪ್ರಮಾಣದ ಶಸ್ತ್ರ ಚಿಕಿತ್ಸೆಗಳನ್ನು (Cauterisation, D&C) ಹೊರತುಪಡಿಸಿ ಬೇರೆ ಚಿಕಿತ್ಸೆಗಳನ್ನು ಕೈಗೊಳ್ಳಲಾಗುತ್ತಿಲ್ಲ. ಶಸ್ತ್ರ ಚಿಕಿತ್ಸೆಗೆ ಬೇಕಾಗುವ ಮಧ್ಯಮ ಹಾಗು ಗಂಭೀರ ತರಹದ ರೋಗಗಳಿಗೆ ಯಶಸ್ವಿನಿ ಯೋಜನೆ, ವಾಜಪೇಯಿ ಆರೋಗ್ಯಶ್ರೀ ಯೋಜನೆ, ರಾಷ್ಟ್ರೀಯ ಸ್ವಾಸ್ಥ ಭೀಮಾ ಯೋಜನೆಗಳಲ್ಲಿ ಚಿಕಿತ್ಸೆಗಳನ್ನು ಒದಗಿಸಲಾಗುತ್ತಿದೆ. ಅಲ್ಲದೆ, ಸಮುದಾಯ ಆರೋಗ್ಯ ಕೇಂದ್ರಗಳು, ತಾಲ್ಲೂಕು ಮತ್ತು ಜಿಲ್ಲಾ ಆಸ್ಪತ್ರೆಗಳು ಹಾಗು ಇಲಾಖೆಯ ವ್ಯಾಪ್ತಿಯಡಿ ಬರುವ ಇತರೇ ಪ್ರಮುಖ ಆಸ್ಪತ್ರೆಗಳಲ್ಲಿ ಶಸ್ತ್ರ ಚಿಕಿತ್ಸಾ ಸೇವೆಗಳನ್ನು ಒದಗಿಸಲಾಗುತ್ತಿದ್ದು, ಬಡತನ ರೇಖೆಗಿಂತ ಕೆಳಗಿರುವವರಿಗೆ ಉಚಿತ ಸೇವೆಗಳನ್ನು ಒದಗಿಸಲಾಗುತ್ತಿದೆ. ಸದರಿ ವಿವರಗಳನ್ನು ಆಯುಕ್ತರು ನೀಡುತ್ತಾ, ಮೇಲೆ ತಿಳಿಸಿದ ಆಯವ್ಯಯ ಭಾಷಣದಲ್ಲಿ ಘೋಷಿಸಿರುವುದನ್ನು ಜಾರಿಗೊಳಿಸುವ ಕುರಿತಂತೆ ಸರ್ಕಾರದ ಸೂಕ್ತ ಆದೇಶವನ್ನು ನೀಡಲು ಕೋರಿದ್ದಾರೆ.

ಈ ಪ್ರಸ್ತಾವನೆ ಬಗ್ಗೆ ಕೂಲಂಕಷವಾಗಿ ಸರ್ಕಾರವು ಪರಿಶೀಲಿಸಿದೆ. ವಿವಿಧ ಕಾಯಿಲೆಗಳಿಗೆ ಚಿಕಿತ್ಸೆಯನ್ನು ನೀಡುವುದು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಚಾಲ್ತಿಯಲ್ಲಿರುವ ಯೋಜನೆಯಾಗಿದೆ. ಇಲಾಖೆಯ ವ್ಯಾಪ್ತಿಯಡಿ ಬರುವ ಸರ್ಕಾರಿ ಆಸ್ಪತ್ರೆ / ಕೇಂದ್ರಗಳಲ್ಲಿ ಬಿ.ಪಿ.ಎಲ್. ರೋಗಿಗಳಿಗೆ ಸಂಬಂಧಿಸಿದಂತೆ ಈಗಾಗಲೇ ಉಚಿತವಾಗಿ ಚಿಕಿತ್ಸೆಯನ್ನು ನೀಡಲಾಗುತ್ತಿದೆ. ಆದರೆ, ಎ.ಪಿ.ಎಲ್. ರೋಗಿಗಳಿಗೆ ಸಂಬಂಧಿಸಿದಂತೆ, ಸರ್ಕಾರವು ಕೆಲವು ದರದ ಶುಲ್ಕವನ್ನು ನಿಗದಿಪಡಿಸಿದೆ. ವಸೂಲಾಗುತ್ತಿರುವ ಸದರಿ ಶುಲ್ಕವನ್ನು ಸಂಬಂಧಪಟ್ಟ ಆಸ್ಪತ್ರೆಯ ಆರೋಗ್ಯ ರಕ್ಷಾ ಸಮಿತಿ ಲೆಕ್ಕಕ್ಕೆ ಜಮೆ ಮಾಡಿ, ಸದರಿ ಸಂಪನ್ಮೂಲವನ್ನು ಆಸ್ಪತ್ರೆಯ ಒಟ್ಟಾರೆ ಅಭಿವೃದ್ಧಿ ಕಾರ್ಯ ಚಟುವಟಿಕೆಗಳಿಗೆ ನಿಗದಿಪಡಿಸಿರುವ ಮಾನದಂಡಗಳ ಪ್ರಕಾರ ಉಪಯೋಗಿಸಲ್ಪಡುತ್ತಿದೆ. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವ್ಯಾಪ್ತಿಯಡಿ ಬರುವ ಸರ್ಕಾರಿ ಆಸ್ಪತ್ರೆ / ಕೇಂದ್ರಗಳಲ್ಲಿ ಎ.ಪಿ.ಎಲ್ ರೈತರ ಮಹಿಳೆಯರಿಗೆ ಸಹ ಗರ್ಭಕೋಶ ಕಾಯಿಲೆಗಳಿಗೆ ಸಂಬಂಧಿಸಿದಂತೆ ಉಚಿತವಾಗಿ ಚಿಕಿತ್ಸೆಯನ್ನು ನೀಡಲು ಸದರಿ ರೋಗಿಗಳಿಂದ ನಿಗದಿತ ಶುಲ್ಕವನ್ನು ವಸೂಲು ಮಾಡುವುದರಿಂದ ವಿನಾಯಿತಿ ನೀಡಬೇಕಾಗುತ್ತದೆ. ಈ ಪ್ರಸ್ತಾವನೆಯು ಚಾಲ್ತಿಯಲ್ಲಿರುವ ಯೋಜನೆಯಡಿ ಹೆಚ್ಚುವರಿ ಕಾಂಪೋನೆಂಟ್ ಆಗುವ ಕಾರಣ, ಮೇಲೆ (3) ರಲ್ಲಿ ಓದಲಾದ ಅಧಿಕಾರಯುಕ್ತ ಸಮಿತಿಯ ಮುಂದೆ ವಿಷಯವನ್ನು ಮಂಡಿಸಲಾಗಿತ್ತು. ಸದರಿ ಸಭೆಯಲ್ಲಿ ಈ ಪ್ರಸ್ತಾವನೆ ಬಗ್ಗೆ ಕೂಲಂಕಷವಾಗಿ ಚರ್ಚಿಸಿದ ನಂತರ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವ್ಯಾಪ್ತಿಯಡಿ ಬರುವ (ವೈದ್ಯಕೀಯ ಶಿಕ್ಷಣ ಇಲಾಖೆ ಸೇರಿದಂತೆ) ಸರ್ಕಾರಿ ಆಸ್ಪತ್ರೆ / ಕೇಂದ್ರಗಳಲ್ಲಿ ಎಲ್ಲಾ ಮಹಿಳೆಯರಿಗೆ ಗರ್ಭಕೋಶದ ಕಾಯಿಲೆಗಳಿಗೆ ಚಿಕಿತ್ಸೆಯನ್ನು (ಬಡತನ ರೇಖೆಗಿಂತ ಮೇಲ್ಪಟ್ಟ ಮಹಿಳೆಯರೂ ಸೇರಿದಂತೆ) ಉಚಿತವಾಗಿ ನೀಡಲು ನಿರ್ಧರಿಸಲಾಯಿತು. ಮುಂದುವರೆದು, ಈ ಸಂಬಂಧ ಬಡತನ ರೇಖೆಗಿಂತ ಮೇಲ್ಪಟ್ಟ ಮಹಿಳೆಯರು ಪ್ರಸ್ತುತ ಪಾವತಿಸುತ್ತಿರುವ ಶುಲ್ಕದಿಂದ ವಿನಾಯಿತಿ ನೀಡಲು ಸಹ ತೀರ್ಮಾನಿಸಲಾಯಿತು. ವೈದ್ಯಕೀಯ ಶಿಕ್ಷಣ ಇಲಾಖೆಯ ವ್ಯಾಪ್ತಿಯಡಿ ಬರುವ ಸರ್ಕಾರಿ ಆಸ್ಪತ್ರೆಗಳಲ್ಲಿ ಮಹಿಳೆಯರ ಗರ್ಭಕೋಶದ ಕಾಯಿಲೆಗಳಿಗೆ ಸಂಬಂಧಿಸಿದಂತೆ ಈ ರೀತಿ ಉಚಿತ ಚಿಕಿತ್ಸೆ ನೀಡುವುದರ ಪರಿಣಾಮವಾಗಿ ಸದರಿ ಆಸ್ಪತ್ರೆಗಳು ವಸೂಲು ಮಾಡುತ್ತಿದ್ದ ಶುಲ್ಕದ ಮೊತ್ತವನ್ನು ವೈದ್ಯಕೀಯ ಶಿಕ್ಷಣ ಇಲಾಖೆ ಆಸ್ಪತ್ರೆಗಳ ಆರೋಗ್ಯ ರಕ್ಷಾ ಸಮಿತಿಗಳಿಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು ಮರುಪಾವತಿ ಮಾಡಲು ಕ್ರಮ ಕೈಗೊಳ್ಳಬೇಕೆಂದು ಸಹ ತೀರ್ಮಾನಿಸಲಾಯಿತು.

ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 118 ಸಿಜಿಎಂ 2012 ಬೆಂಗಳೂರು, ದಿನಾಂಕ: 20-3-2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವ್ಯಾಪ್ತಿಯಡಿ ಬರುವ (ವೈದ್ಯಕೀಯ ಶಿಕ್ಷಣ ಇಲಾಖೆ ಸೇರಿದಂತೆ) ಎಲ್ಲಾ ಸರ್ಕಾರಿ ಆಸ್ಪತ್ರೆ / ಕೇಂದ್ರಗಳಲ್ಲಿ ಮಹಿಳೆಯರ ಗರ್ಭಕೋಶದ ಕಾಯಿಲೆಗಳಿಗೆ ಚಿಕಿತ್ಸೆಯನ್ನು ಉಚಿತವಾಗಿ ನೀಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ. ಈ ಸಂಬಂಧ ಬಡತನ ರೇಖೆಗಿಂತ ಮೇಲ್ಪಟ್ಟ ಮಹಿಳೆಯರು ಪ್ರಸ್ತುತ ಪಾವತಿಸುತ್ತಿರುವ ಶುಲ್ಕದಿಂದ ವಿನಾಯಿತಿ ನೀಡಲು ಸಹ ಸರ್ಕಾರದ ಮಂಜೂರಾತಿ ನೀಡಲಾಗಿದೆ. ತತ್ಸಂಬಂಧ ಬಡತನ ರೇಖೆಗಿಂತ ಮೇಲ್ಪಟ್ಟ ರೋಗಿಗಳಿಂದ ಸದರಿ ಆಸ್ಪತ್ರೆಗಳಿಗೆ ಆಂತರಿಕ ಸಂಪನ್ಮೂಲವಾಗಿ ಸ್ವೀಕರಿಸಲ್ಪಡುತ್ತಿದ್ದ ಶುಲ್ಕವನ್ನು ಸಂಬಂಧಪಟ್ಟ ಆಸ್ಪತ್ರೆಗಳ ಆರೋಗ್ಯ ರಕ್ಷಾ ಸಮಿತಿಗಳಿಗೆ ಮರುಪಾವತಿಸಲು ಸಹ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ದಿನಾಂಕ: 20-3-2012 ರಂದು ನಡೆದ ಅಧಿಕಾರಯುಕ್ತ ಸಮಿತಿ ಸಭೆಯಲ್ಲಿ ತೆಗೆದುಕೊಂಡ ತೀರ್ಮಾನದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ. ನಾರಾಯಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಪಿ.ಆರ್. 1181**

## ಜಲಸಂಪನ್ಮೂಲ ಸಚಿವಾಲಯ

**ವಿಷಯ :–** ಬಾಗಲಕೋಟ ಜಿಲ್ಲೆ, ಮುಧೋಳ ತಾಲ್ಲೂಕಿನ ಹತ್ತಿರ ಘಟಪ್ರಭಾ ನದಿಗೆ ಪ್ರವಾಹ ನಿಯಂತ್ರಣ ಕಾಮಗಾರಿಯ ಟೆಂಡರ್ ಅನುಮೋದನೆ ಬಗ್ಗೆ.

**ಓದಲಾಗಿದೆ :–**
1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಸಂಖ್ಯೆ: ಮುಇಂ; ಸನೀ(ಉ)ವಲಯ: ಬಿಜೆಪಿ: ಎಇ–6: 2011–12: 1559, ದಿನಾಂಕ 19.03.2012.
2) ಸರ್ಕಾರದ ಆದೇಶ ಸಂಖ್ಯೆ: ಸನೀಇ 109 ಮಸಾವಿ 2011(1) (ತಾಂತ್ರಿಕ), ದಿನಾಂಕ: 03.11.2011.

**ಪ್ರಸ್ತಾವನೆ:**

ಬಾಗಲಕೋಟ ಜಿಲ್ಲೆ, ಮುಧೋಳ ತಾಲ್ಲೂಕಿನ ಹತ್ತಿರ ಘಟಪ್ರಭಾ ನದಿಗೆ ಪ್ರವಾಹ ನಿಯಂತ್ರಣ ಕಾಮಗಾರಿಯು ಭಾರತ ಸರ್ಕಾರದ ಪ್ರವಾಹ ನಿರ್ವಹಣೆ ಕಾರ್ಯಕ್ರಮದಡಿ ಅನುಮೋದನೆ ಗೊಂಡಿರುತ್ತದೆ. ಈ ಕಾಮಗಾರಿಯ ರೂ.1498.00ಲಕ್ಷಗಳ ಅಂದಾಜು ಪಟ್ಟಿಗೆ ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋಧನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಇಂಡಿಯನ್ ಟ್ರೇಡ್ ಜರ್ನಲ್ | 15.02.2012 |
| ರಾಜ್ಯ ಟೆಂಡರ್ ಬುಲೆಟಿನ್ | 17.02.2012 |
| ಸಂಯುಕ್ತ ಕರ್ನಾಟಕ ದಿನ ಪತ್ರಿಕೆ | 18.02.2012 |
| ಟೈಮ್ಸ್ ಆಫ್ ಇಂಡಿಯಾ | 18.02.2012 |

ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರನ್ನು ತೆರೆದು ಪರಿಶೀಲಿಸಲಾಗಿ ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು ಇವರು ಅರ್ಹತೆ ಹೊಂದಿರುತ್ತಾರೆ. ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ 1429,89,214/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ 14,28,43,098/– |

| ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|
| ಅಮೃತ ಕನ್‌ಸ್ಟ್ರಕ್ಷನ್ಸ್ ಪ್ರೈವೇಟ್ ಲಿಮಿಟೆಡ್, ಗುತ್ತಿಗೆದಾರರು, ಸಿಂಧನೂರು. | 1699,76,056/– | 18.873<br>ಹೆಚ್ಚು | 18.995<br>ಹೆಚ್ಚು |

ಮೇಲ್ಕಂಡಂತೆ ಮೆ॥ ಅಮೃತ ಕನ್‌ಸ್ಟ್ರಕ್ಷನ್ಸ್ ಪ್ರೈವೇಟ್ ಲಿಮಿಟೆಡ್, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 18.995ರಷ್ಟು ಹೆಚ್ಚಾಗಿರುತ್ತದೆ.

ಇವರ ಟೆಂಡರನ್ನು ದಿನಾಂಕ: 24.03.2012ರಂದು ನಡೆದ ಇಲಾಖಾ ಟೆಂಡರ್ ಪರಿಶೀಲನಾ ಸಭೆಗೆ ಮಂಡಿಸಿ ಪರಿಶೀಲಿಸಲಾಯಿತು. ಗುತ್ತಿಗೆದಾರರು ಕೆಲಸವನ್ನು ನಿರ್ವಹಿಸಲು ಉಂಟಾಗುವ ಸಮಸ್ಯೆಗಳ ಕುರಿತು ವಿವರಿಸಿದರು ಹಾಗೂ ಕಾಮಗಾರಿಯನ್ನು ಪರಿಷ್ಕೃತ ಟೆಂಡರಿಗಿಟ್ಟ ಮೊತ್ತದ ಮೇಲೆ ಶೇ.14.50ರಷ್ಟು ಹೆಚ್ಚಿನ ದರಗಳಲ್ಲಿ ನಿರ್ವಹಿಸಲು ಸಹಮತಿ ಪತ್ರವನ್ನು ನೀಡಿದರು. ಸಮಿತಿಯು ಈ ಟೆಂಡರನ್ನು ಸುಧೀರ್ಘವಾಗಿ ಪರಿಶೀಲಿಸಿದ ಮೇಲೆ ಶೇ.14.50ರಷ್ಟು ಹೆಚ್ಚಿನ ದರಗಳಿಗೆ ಟೆಂಡರನ್ನು ಅನುಮೋದಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿದೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ ರೂ.14,28,43,098/–ಗಳ ಮೇಲೆ ಶೇ.14.50ರಷ್ಟು ಹೆಚ್ಚಿನ ಮೊತ್ತಕ್ಕೆ ಅಂದರೆ ರೂ.16,35,55,347/–ಗಳಿಗೆ ಮೆ॥ ಅಮೃತಾ ಕನ್‌ಸ್ಟ್ರಕ್ಷನ್ಸ್ ಪ್ರೈವೇಟ್ ಲಿಮಿಟೆಡ್, ಇವರಿಗೆ ವಹಿಸಲು ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 04 ಪ್ರನೀಕಾ(ತಾಂತ್ರಿಕ) 2012, ಬೆಂಗಳೂರು, ದಿನಾಂಕ: 13ನೇ ಏಪ್ರಿಲ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟ ಜಿಲ್ಲೆ, ಮುಧೋಳ ತಾಲ್ಲೂಕಿನ ಹತ್ತಿರ ಘಟಪ್ರಭಾ ನದಿಗೆ ಪ್ರವಾಹ ನಿಯಂತ್ರಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ.14,28,43,098/–ಗಳ ಮೇಲೆ ಶೇ.14.50ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ.16,35,55,347/–ಗಳಿಗೆ (ರೂ. ಹದಿನಾರು ಕೋಟಿ ಮೂವತ್ತೈದು ಲಕ್ಷ ಐವತ್ತೈದು ಸಾವಿರದ ಮುನ್ನೂರ ನಲವತ್ತೇಳು ಮಾತ್ರ)ಗಳಿಗೆ ಮೆ॥ ಅಮೃತಾ ಕನ್‌ಸ್ಟ್ರಕ್ಷನ್ಸ್ ಪ್ರೈವೇಟ್ ಲಿಮಿಟೆಡ್ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ:16.05.2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ,**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

**ಪಿ.ಆರ್. 1228** ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :–** ಬಾಗಲಕೋಟೆ ಜಿಲ್ಲೆ ಬದಾಮಿ ತಾಲ್ಲೂಕಿನ ನಾಗರಾಳ(ಎಸ್.ಬಿ) ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ (ಸರ್ವೆ.ನಂ. 12/2, 12/3, 12/4 ಮತ್ತು 12/5) ಕಾಮಗಾರಿ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :–** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ:ಮುಇಂ/ ಸನೀ(ಉ)ವಲಯ/ಬಿಜೆಪಿ/ಎಇ–6/2011–12/1460ದಿನಾಂಕ:15.03.2012

**ಪ್ರಸ್ತಾವನೆ:**

ಬಾಗಲಕೋಟೆ ಜಿಲ್ಲೆ ಬದಾಮಿ ತಾಲ್ಲೂಕಿನ ನಾಗರಾಳ(ಎಸ್.ಬಿ) ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ (ಸರ್ವೆ.ನಂ. 12/2, 12/3, 12/4 ಮತ್ತು 12/5) ಕಾಮಗಾರಿಯು 2011–12ನೇ ಸಾಲಿನ ವಿಶೇಷ ಘಟಕ ಯೋಜನೆಯಡಿ ಅನುಮೋದನೆ ಗೊಂಡಿರುತ್ತದೆ. ಈ ಕಾಮಗಾರಿಯ ಅಂದಾಜು ಪಟ್ಟಿಗೆ ಕಾರ್ಯಪಾಲಕ ಇಂಜಿನಿಯರ್ ಸಣ್ಣ ನೀರಾವರಿ ವಿಭಾಗ, ಬಿಜಾಪುರರವರು ಆಡಳಿತಾತ್ಮಕ ಅನುಮೋಧನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 09.12.2011 |
| ಪ್ರಜಾವಾಣಿ ದಿನ ಪತ್ರಿಕೆ | 13.12.2011 |

ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರನ್ನು ತೆರೆದು ಪರಿಶೀಲಿಸಲಾಗಿ ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಒಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿರುತ್ತಾರೆ. ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ.4,19,771/– |

| ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|
| ಸಂಗಣ್ಣ ಎನ್. ನಂದನೂರು, ಒಂದನೇ ದರ್ಜೆ ಗುತ್ತಿಗೆದಾರರು | 4,85,739/– | 15.72<br>ಹೆಚ್ಚು |

ಮೇಲ್ಕಂಡಂತೆ ಶ್ರೀ ಸಂಗಣ್ಣ ಎನ್. ನಂದನೂರು, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 15.72ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 4,19,771/–ಗಳ ಮೇಲೆ ಶೇ.13.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ.4,74,341/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 18 ಏನೀಯೋ(ತಾಂತ್ರಿಕ) 2012 ಬೆಂಗಳೂರು, ದಿನಾಂಕ: 13ನೇ ಏಪ್ರಿಲ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆ ಬದಾಮಿ ತಾಲ್ಲೂಕಿನ ನಾಗರಾಳ(ಎಸ್.ಬಿ) ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ (ಸರ್ವೆ.ನಂ. 12/2, 12/3, 12/4 ಮತ್ತು 12/5) ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 4,19,771/–ಗಳ ಮೇಲೆ ಶೇ.13.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ.4,74,341/–ಗಳಿಗೆ (ರೂ. ನಾಲ್ಕು ಲಕ್ಷ ಎಪ್ಪತ್ತನಾಲ್ಕು ಸಾವಿರದ ಮುನ್ನೂರ ನಲವತ್ತೊಂದು ಮಾತ್ರ)ಗಳಿಗೆ ಶ್ರೀ ಸಂಗಣ್ಣ ಎನ್. ನಂದನೂರು, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ:16.05.2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ,**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಪಿ.ಆರ್. 1229**

## ಜಲಸಂಪನ್ಮೂಲ ಸಚಿವಾಲಯ

**ವಿಷಯ :–** ಬಿಜಾಪುರ ಜಿಲ್ಲೆ ಹಾಗೂ ತಾಲ್ಲೂಕಿನ ಕನ್ನೂರ ಗ್ರಾಮದ ಸರ್ವೆ.ನಂ. 145/1ಬಿ, 145/2ಬ, 145/2ಅ ಗಳ ಮಲ್ಲಪ್ಪ ಬಾಲಪ್ಪ ಮಾದರ ಹಾಗೂ ಇತರರ ಜಮೀನುಗಳಿಗೆ ಬೋರ್ ವೆಲ್ ಮೂಲಕ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :–** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ:ಮುಇಂ/ಸನೀ(ಉ) ವ/ಬಿಜೆಪಿ/ಪಿಬಿ–9/ಕನ್ನೂರ(ಸರ್ವೆ ನಂ.145) ಏ.ನೀ.ಯೋ./ 2011–12/1452/ದಿನಾಂಕ:14.03.2012.

**ಪ್ರಸ್ತಾವನೆ:**

ಬಿಜಾಪುರ ಜಿಲ್ಲೆ ಹಾಗೂ ತಾಲ್ಲೂಕಿನ ಕನ್ನೂರ ಗ್ರಾಮದ ಸರ್ವೆ.ನಂ. 145/1ಬಿ, 145/2ಬ, 145/2ಅ ಗಳ ಮಲ್ಲಪ್ಪ ಬಾಲಪ್ಪ ಮಾದರ ಹಾಗೂ ಇತರರ ಜಮೀನುಗಳಿಗೆ ಬೋರ್ ವೆಲ್ ಮೂಲಕ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯು 2011–12ನೇ ಸಾಲಿನ ವಿಶೇಷ ಘಟಕ ಯೋಜನೆಯಡಿ ಅನುಮೋದನೆ ಗೊಂಡಿರುತ್ತದೆ. ಈ ಕಾಮಗಾರಿಯ ಅಂದಾಜು ಪಟ್ಟಿಗೆ ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಬೆಳಗಾವಿರವರು ಆಡಳಿತಾತ್ಮಕ ಅನುಮೋಧನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 16.01.2012 |
| ವಿಜಯಕರ್ನಾಟಕ ದಿನಪತ್ರಿಕೆ | 13.01.2012 |

ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರನ್ನು ತೆರೆದು ಪರಿಶೀಲಿಸಲಾಗಿ ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು ಇವರು ಅರ್ಹತೆ ಹೊಂದಿರುತ್ತಾರೆ. ವಿವರಗಳು ಕೆಳಕಂಡಂತಿವೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 8,00,525/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 8,00,130/– |
| **ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್** | **ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ** | **ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ** | **ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ** |
| ಎಸ್.ಬಿ.ಕರೇಕಲ್, ಒಂದನೇ ದರ್ಜೆ ಗುತ್ತಿಗೆದಾರರು | 9,14,970/– | 14.29 ಹೆಚ್ಚು | 14.35 ಹೆಚ್ಚು |

ಮೇಲ್ಕಂಡಂತೆ ಶ್ರೀ ಎಸ್.ಬಿ.ಕರೇಕಲ್, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 14.35ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 8,00,130/–ಗಳ ಮೇಲೆ ಶೇ.13.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ.9,04,147/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 19 ಏನೀಯೋ(ತಾಂತ್ರಿಕ) 2012 ಬೆಂಗಳೂರು, ದಿನಾಂಕ: 13ನೇ ಏಪ್ರಿಲ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆ ಹಾಗೂ ತಾಲ್ಲೂಕಿನ ಕನ್ನೂರ ಗ್ರಾಮದ ಸರ್ವೆ.ನಂ. 145/1ಬಿ, 145/2ಬ, 145/2ಅ ಗಳ ಮಲ್ಲಪ್ಪ ಬಾಲಪ್ಪ ಮಾದರ ಹಾಗೂ ಇತರರ ಜಮೀನುಗಳಿಗೆ ಬೋರ್ ವೆಲ್ ಮೂಲಕ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 8,00,130/–ಗಳ ಮೇಲೆ ಶೇ.13.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ.9,04,147/–ಗಳಿಗೆ (ರೂ. ಒಂಭತ್ತು ಲಕ್ಷ ನಾಲ್ಕು ಸಾವಿರದ ಒಂದು ನೂರ ನಲವತ್ತೇಳು ಮಾತ್ರ)ಗಳಿಗೆ ಶ್ರೀ ಎಸ್.ಬಿ.ಕರೇಕಲ್, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

3. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.

4. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ:16.05.2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ,**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಪಿ.ಆರ್. 1230**

## ಜಲಸಂಪನ್ಮೂಲ ಸಚಿವಾಲಯ

**ವಿಷಯ :–** ಬಾಗಲಕೋಟೆ ಜಿಲ್ಲೆ ಜಮಖಂಡಿ ತಾಲ್ಲೂಕಿನ ತುಂಗಳ ಗ್ರಾಮದ ಹತ್ತಿರ ಏತ ನೀರಾವರಿ ನಿರ್ಮಾಣ (ಸರ್ವೆ ನಂ.366,350) ಕಾಮಗಾರಿ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :–** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ ಸನೀ(ಉ)ವಲಯ/ ಬಿಜೆಪಿ/ಎಇ–6/ 2011–12/1459, ದಿನಾಂಕ :15.03.2012

**ಪ್ರಸ್ತಾವನೆ:**

ಬಾಗಲಕೋಟೆ ಜಿಲ್ಲೆ ಜಮಖಂಡಿ ತಾಲ್ಲೂಕಿನ ತುಂಗಳ ಗ್ರಾಮದ ಹತ್ತಿರ ಏತ ನೀರಾವರಿ ನಿರ್ಮಾಣ (ಸರ್ವೆ ನಂ.366,350) ಕಾಮಗಾರಿಯು 2011–12ನೇ ಸಾಲಿನ ವಿಶೇಷ ಘಟಕ ಯೋಜನೆಯಡಿ ಅನುಮೋದನೆ ಗೊಂಡಿರುತ್ತದೆ. ಈ ಕಾಮಗಾರಿಯ ಅಂದಾಜು ಪಟ್ಟಿಗೆ ಅಧೀಕ್ಷಕ ಇಂಜಿನಿಯರ್ ಸಣ್ಣ ನೀರಾವರಿ ವೃತ್ತ, ಬೆಳಗಾವಿರವರು ಆಡಳಿತಾತ್ಮಕ ಅನುಮೋಧನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | ದಿನಾಂಕ: 09.12.2011 |
| ಪ್ರಜಾವಾಣಿ ದಿನ ಪತ್ರಿಕೆ | ದಿನಾಂಕ: 13.12.2011 |

ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರನ್ನು ತೆರೆದು ಪರಿಶೀಲಿಸಲಾಗಿ ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ನಾಲ್ಕು ಜನ ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಒಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿರುತ್ತಾರೆ. ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | ರೂ.29,93,103/– |
|---|---|---|
| **ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್** | **ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ** | **ಮಂಜೂರಾದ ಅಂದಾಜಿನ ದರಗಳ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ** |
| ಡಿ.ಎಂ.ತೋಟದ, ಒಂದನೇ ದರ್ಜೆ ಗುತ್ತಿಗೆದಾರರು | 33,90,918/– | 13.29 ಹೆಚ್ಚು |

ಮೇಲ್ಕಂಡಂತೆ ಶ್ರೀ ಡಿ.ಎಂ.ತೋಟದ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 13.29ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 29,93,103/– ಗಳ ಮೇಲೆ ಶೇ.13.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ.33,82,206/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 21 ಏನೀಯೋ(ತಾಂತ್ರಿಕ) 2012, ಬೆಂಗಳೂರು, ದಿನಾಂಕ: 13ನೇ ಏಪ್ರಿಲ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆ ಜಮಖಂಡಿ ತಾಲ್ಲೂಕಿನ ತುಂಗಳ ಗ್ರಾಮದ ಹತ್ತಿರ ಏತ ನೀರಾವರಿ ನಿರ್ಮಾಣ (ಸರ್ವೆ ನಂ.366,350) ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 29,93,103/–ಗಳ ಮೇಲೆ ಶೇ.13.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ.33,82,206/–ಗಳಿಗೆ (ರೂ. ಮೂವತ್ತಮೂರು ಲಕ್ಷ ಎಂಬತ್ತೆರಡು ಸಾವಿರದ ಇನ್ನೂರ ಆರು ಮಾತ್ರ)ಗಳಿಗೆ ಶ್ರೀ ಡಿ.ಎಂ.ತೋಟದ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ:16.05.2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ,**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಪಿ.ಆರ್. 1231**

## ಜಲಸಂಪನ್ಮೂಲ ಸಚಿವಾಲಯ

**ವಿಷಯ :–** ಬಾಗಲಕೋಟೆ ಜಿಲ್ಲೆ ಜಮಖಂಡಿ ತಾಲ್ಲೂಕಿನ ಕುಲಹಳ್ಳಿ ಗ್ರಾಮದ ಮಹಾದೇವ ಪುಂಡಲೀಕ ಮಾದರ ಇವರ ಜಮೀನುಗಳಿಗೆ ಏತ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿ ಟೆಂಡರನ್ನು ಅನುಮೋದಿಸುವ ಬಗ್ಗೆ.

**ಓದಲಾಗಿದೆ :–** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ ಸನೀ(ಉ)ವಲಯ/ ಬಿಜೆಪಿ/ ಎಇ–6/ 2011–12/ 1804, ದಿನಾಂಕ:24.03.2012.

**ಪ್ರಸ್ತಾವನೆ:**

ಬಾಗಲಕೋಟೆ ಜಿಲ್ಲೆ ಜಮಖಂಡಿ ತಾಲ್ಲೂಕಿನ ಕುಲಹಳ್ಳಿ ಗ್ರಾಮದ ಮಹಾದೇವ ಪುಂಡಲೀಕ ಮಾದರ ಇವರ ಜಮೀನುಗಳಿಗೆ ಏತ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯು 2011–12ನೇ ಸಾಲಿನ ವಿಶೇಷ ಘಟಕ ಯೋಜನೆಯಡಿ ಅನುಮೋದನೆ ಗೊಂಡಿರುತ್ತದೆ. ಈ ಕಾಮಗಾರಿಯ ಅಂದಾಜು ಪಟ್ಟಿಗೆ ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಬೆಳಗಾವಿರವರು ಆಡಳಿತಾತ್ಮಕ ಅನುಮೋಧನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 10.02.2012 |
| ಸಂಯುಕ್ತ ಕರ್ನಾಟಕ ದಿನ ಪತ್ರಿಕೆ | 11.02.2012 |

ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರನ್ನು ತೆರೆದು ಪರಿಶೀಲಿಸಲಾಗಿ ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು ಇವರು ಅರ್ಹತೆ ಹೊಂದಿರುತ್ತಾರೆ. ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | ರೂ.40,23,115/– |
|---|---|---|
| **ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್** | **ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ** | **ಮಂಜೂರಾದ ಅಂದಾಜಿನ ದರಗಳ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ** |
| ಹೆಚ್. ಆರ್. ಚಿಂಚಲಿ, ಒಂದನೇ ದರ್ಜೆ ಗುತ್ತಿಗೆದಾರರು | 55,51,585/– | 37.99 ಹೆಚ್ಚು |

ಮೇಲ್ಕಂಡಂತೆ ಶ್ರೀ ಹೆಚ್. ಆರ್. ಚಿಂಚಲಿ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 37.99ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 40,23,115/–ಗಳ ಮೇಲೆ ಶೇ.13.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ.45,46,120/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 27 ಏನೀಯೋ(ತಾಂತ್ರಿಕ) 2012 ಬೆಂಗಳೂರು, ದಿನಾಂಕ: 13ನೇ ಏಪ್ರಿಲ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆ ಜಮಖಂಡಿ ತಾಲ್ಲೂಕಿನ ಕುಲಹಳ್ಳಿ ಗ್ರಾಮದ ಮಹಾದೇವ ಪುಂಡಲೀಕ ಮಾದರ ಇವರ ಜಮೀನುಗಳಿಗೆ ಏತ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ.40,23,115/–ಗಳ ಮೇಲೆ ಶೇ.13.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ.45,46,120/–ಗಳಿಗೆ (ರೂ. ನಲವತ್ತೈದು ಲಕ್ಷ ನಲವತ್ತಾರು ಸಾವಿರದ ಒಂದು ನೂರ ಇಪ್ಪತ್ತು ಮಾತ್ರ)ಗಳಿಗೆ ಶ್ರೀ ಹೆಚ್. ಆರ್. ಚಿಂಚಲಿ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.

2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ:16.05.2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ,**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಪಿ.ಆರ್. 1232**

## ಜಲಸಂಪನ್ಮೂಲ ಸಚಿವಾಲಯ

**ವಿಷಯ :–** ಬಾಗಲಕೋಟೆ ಜಿಲ್ಲೆ ಮುಧೋಳ ತಾಲ್ಲೂಕಿನ ಹೆಬ್ಬಾಳ ಗ್ರಾಮದ ಹತ್ತಿರ ಸರ್ವೆ.ನಂ. 191 ಹಾಗೂ ಇತರರ ಜಮೀನುಗಳಿಗೆ ಏತ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :–** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ ಸನೀ(ಉ)ವಲಯ/ ಬಿಜೆಪಿ/ ಎಇ–6/ 2011–12/ 1802, ದಿನಾಂಕ:24.03.2012

**ಪ್ರಸ್ತಾವನೆ:**

ಬಾಗಲಕೋಟೆ ಜಿಲ್ಲೆ ಮುಧೋಳ ತಾಲ್ಲೂಕಿನ ಹೆಬ್ಬಾಳ ಗ್ರಾಮದ ಹತ್ತಿರ ಸರ್ವೆ.ನಂ. 191 ಹಾಗೂ ಇತರರ ಜಮೀನುಗಳಿಗೆ ಏತ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯು 2011–12ನೇ ಸಾಲಿನ ವಿಶೇಷ ಘಟಕ ಯೋಜನೆಯಡಿ ಅನುಮೋದನೆ ಗೊಂಡಿರುತ್ತದೆ. ಈ ಕಾಮಗಾರಿಯ ಅಂದಾಜು ಪಟ್ಟಿಗೆ ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಬೆಳಗಾವಿರವರು ಆಡಳಿತಾತ್ಮಕ ಅನುಮೋಧನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 21.01.2012 |
| ಸಂಯುಕ್ತ ಕರ್ನಾಟಕ ದಿನ ಪತ್ರಿಕೆ | 19.01.2012 |

ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರನ್ನು ತೆರೆದು ಪರಿಶೀಲಿಸಲಾಗಿ ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು ಇವರು ಅರ್ಹತೆ ಹೊಂದಿರುತ್ತಾರೆ. ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 30,92,264/– |

| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|
| ಎಸ್.ಬಿ.ಕರೇಕಲ್, ಒಂದನೇ ದರ್ಜೆ ಗುತ್ತಿಗೆದಾರರು | 38,59,535/– | 24.81 ಹೆಚ್ಚು |

ಮೇಲ್ಕಂಡಂತೆ ಶ್ರೀ ಎಸ್.ಬಿ.ಕರೇಕಲ್, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 24.81ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 30,92,264/–ಗಳ ಮೇಲೆ ಶೇ.13.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ.34,94,258/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 28 ಏನೀಯೋ(ತಾಂತ್ರಿಕ) 2012 ಬೆಂಗಳೂರು, ದಿನಾಂಕ: 13ನೇ ಏಪ್ರಿಲ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆ ಮುಧೋಳ ತಾಲ್ಲೂಕಿನ ಹೆಬ್ಬಾಳ ಗ್ರಾಮದ ಹತ್ತಿರ ಸರ್ವೆ.ನಂ. 191 ಹಾಗೂ ಇತರರ ಜಮೀನುಗಳಿಗೆ ಏತ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 30,92,264/–ಗಳ ಮೇಲೆ ಶೇ.13.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ.34,94,258/–ಗಳಿಗೆ (ರೂ. ಮೂವತ್ತನಾಲ್ಕು ಲಕ್ಷ ತೊಂಭತ್ತನಾಲ್ಕು ಸಾವಿರದ ಇನ್ನೂರ ಐವತ್ತೆಂಟು ಮಾತ್ರ)ಗಳಿಗೆ ಶ್ರೀ ಎಸ್.ಬಿ.ಕರೇಕಲ್, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ:16.05.2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ,**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಪಿ.ಆರ್. 1233**

## ಜಲಸಂಪನ್ಮೂಲ ಸಚಿವಾಲಯ

**ವಿಷಯ :–** ಬೆಳಗಾವಿ ಜಿಲ್ಲೆ ಚಿಕ್ಕೋಡಿ ತಾಲ್ಲೂಕಿನ ಉಮರಾಣಿ ಗ್ರಾಮದ ಶ್ರೀ ಬಸಪ್ಪ ಭರಮಪ್ಪ ಸವದಿ ಮತ್ತು ಮಾಂಗ ವಗೈರೆ 10 ಜನರಿಗೆ ಗಂಗಾ ಕಲ್ಯಾಣ ನೀರಾವರಿ ಯೋಜನೆ (ರಿ. ಸ.ನಂ. 130/2–ಸಿ) ನಿರ್ಮಾಣ ಕಾಮಗಾರಿ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :–** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವಲಯ/ ಬಿಜೆಪಿ/ಎಇ–1/ 2011 12/1655, ದಿನಾಂಕ :21.03.2012

**ಪ್ರಸ್ತಾವನೆ:**

ಬೆಳಗಾವಿ ಜಿಲ್ಲೆ ಚಿಕ್ಕೋಡಿ ತಾಲ್ಲೂಕಿನ ಉಮರಾಣಿ ಗ್ರಾಮದ ಶ್ರೀ ಬಸಪ್ಪ ಭರಮಪ್ಪ ಸವದಿ ಮತ್ತು ಮಾಂಗ ವಗೈರೆ 10 ಜನರಿಗೆ ಗಂಗಾ ಕಲ್ಯಾಣ ನೀರಾವರಿ ಯೋಜನೆ (ರಿ. ಸ.ನಂ. 130/2–ಸಿ) ನಿರ್ಮಾಣ ಕಾಮಗಾರಿಯು 2011–12ನೇ ಸಾಲಿನ ಗಿರಿಜನ ಉಪ ಯೋಜನೆಯಡಿ

ಅನುಮೋದನೆ ಗೊಂಡಿರುತ್ತದೆ. ಈ ಕಾಮಗಾರಿಯ ಅಂದಾಜು ಪಟ್ಟಿಗೆ ಅಧೀಕ್ಷಕ ಇಂಜಿನಿಯರ್ ಸಣ್ಣ ನೀರಾವರಿ ವೃತ್ತ, ಬೆಳಗಾವಿರವರು ಆಡಳಿತಾತ್ಮಕ ಅನುಮೋಧನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | ದಿನಾಂಕ: 13.02.2012 |
| ಪ್ರಜಾವಾಣಿ ದಿನ ಪತ್ರಿಕೆ | ದಿನಾಂಕ: 14.02.2012 |

ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರನ್ನು ತೆರೆದು ಪರಿಶೀಲಿಸಲಾಗಿ ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು ಇವರು ಅರ್ಹತೆ ಹೊಂದಿರುತ್ತಾರೆ. ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | ರೂ.13,24,435/– |
|---|---|---|
| **ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್** | **ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ** | **ಮಂಜೂರಾದ ಅಂದಾಜಿನ ದರಗಳ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ** |
| ಎಂ.ಎಂ.ಮುಂಡೆವಾಡಗಿ, ಒಂದನೇ ದರ್ಜೆ ಗುತ್ತಿಗೆದಾರರು | 15,09,853/– | 14.00 ಹೆಚ್ಚು |

ಮೇಲ್ಕಂಡಂತೆ ಶ್ರೀ ಎಂ.ಎಂ.ಮುಂಡೆವಾಡಗಿ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 14.00ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 13,24,435/–ಗಳ ಮೇಲೆ ಶೇ.13.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ.14,96,612/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 31 ಏನೀಯೋ(ತಾಂತ್ರಿಕ) 2012 ಬೆಂಗಳೂರು, ದಿನಾಂಕ: 13ನೇ ಏಪ್ರಿಲ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ ಚಿಕ್ಕೋಡಿ ತಾಲ್ಲೂಕಿನ ಉಮರಾಣಿ ಗ್ರಾಮದ ಶ್ರೀ ಬಸಪ್ಪ ಭರಮಪ್ಪ ಸವದಿ ಮತ್ತು ಮಾಂಗ ವಗ್ಯೆರೆ 10 ಜನರಿಗೆ ಗಂಗಾ ಕಲ್ಯಾಣ ನೀರಾವರಿ ಯೋಜನೆ (ರಿ. ಸ.ನಂ. 130/2–ಸಿ) ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ.13,24,435/–ಗಳ ಮೇಲೆ ಶೇ.13.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ.14,96,612/–ಗಳಿಗೆ (ರೂ. ಹದಿನಾಲ್ಕು ಲಕ್ಷ ತೊಂಭತ್ತಾರು ಸಾವಿರದ ಆರುನೂರ ಹನ್ನೆರಡು ಮಾತ್ರ)ಗಳಿಗೆ ಶ್ರೀ ಎಂ.ಎಂ.ಮುಂಡೆವಾಡಗಿ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ:16.05.2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ,**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಪಿ.ಆರ್. 1234**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಪಿ.ಜಿ.ಇ.ಟಿ ಕೌನ್ಸಿಲಿಂಗಾಗಿ ತಯಾರಿಸಲಾಗುವ ಸೀಟ್ ಮ್ಯಾಟ್ರಿಕ್ಸ್‌ಸಿನಲ್ಲಿ ಅಂಗವಿಕಲ ಅಭ್ಯರ್ಥಿಗಳಿಗೆ ಮೀಸಲಾತಿ ನೀಡುವ ಬಗ್ಗೆ.

**ಓದಲಾಗಿದೆ:** 1) ರಿಟ್ ಪಿಟಿಷನ್ ಸಂಖ್ಯೆ: 8253–8254/2012 – ಡಾ: ವೀರೇಶ್ ಹಲ್ಲೂರು V/s ಕರ್ನಾಟಕ ಸರ್ಕಾರ ಮತ್ತು ಇತರರು.

2) ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ ಸಂಖ್ಯೆ: ವೈ.ಶಿ.ನಿ/ಆಪ್ತ/06/2012–13 ದಿನಾಂಕ: 19.04.2012.

**ಪ್ರಸ್ತಾವನೆ:**

ವೈದ್ಯಕೀಯ ಶಿಕ್ಷಣ ನಿರ್ದೇಶಕರು ಮೇಲೆ ಓದಲಾದ ಪತ್ರದಲ್ಲಿ ಅಂಗವಿಕಲ ಅಭ್ಯರ್ಥಿಗಳಾದ ಡಾ: ವೀರೇಶ್ ಹಲ್ಲೂರು ಮತ್ತಿತರರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಪಿಟಿಷನ್ ಸಂಖ್ಯೆ: 8253–8254/2012 ರಲ್ಲಿ ದಾವೆ ಹೂಡಿದ್ದು, ಸದರಿ ದಾವೆಯಲ್ಲಿ ಪಿ.ಜಿ.ಇ.ಟಿ ಕೌನ್ಸಿಲಿಂಗ್‌ಗಾಗಿ ತಯಾರಿಸಲಾಗುವ ಸೀಟ್ ಮ್ಯಾಟ್ರಿಕ್ಸ್‌ನಲ್ಲಿ ಸಮತಳ ಮೀಸಲಾತಿಯನ್ನು ಅನುಸರಿಸಿ ಅಂಗವಿಕಲ ಅಭ್ಯರ್ಥಿಗಳಿಗೆ ಮೀಸಲಾತಿಯನ್ನು ನೀಡಬೇಕೆಂದು ಕೋರಿರುತ್ತಾರೆ. ಈ ಪ್ರಕರಣವನ್ನು ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ 18.4.2012 ರಂದು ವಿಚಾರಣೆಗೆ ತೆಗೆದುಕೊಂಡು ಕೂಲಂಕುಷವಾಗಿ ಎಲ್ಲಾ ವಿಚಾರಗಳನ್ನು ಗಮನಿಸಿ ಕರ್ನಾಟಕ ಸರ್ಕಾರವು ಪಿ.ಜಿ.ಇ.ಟಿ ಕೌನ್ಸಿಲಿಂಗ್‌ಗಾಗಿ ಸೀಟ್ ಮ್ಯಾಟ್ರಿಕ್ಸ್‌ನ್ನು ತಯಾರಿಸುವಾಗ ಅಂಗವಿಕಲ ಅಭ್ಯರ್ಥಿಗಳಿಗೆ ಮೀಸಲಾತಿ ನೀಡುವ ಬಗ್ಗೆ ಅನುಸರಿಸಬೇಕಾದ ಮಾರ್ಗಸೂಚಿಗಳನ್ನು ಕೂಡಲೇ ಹೊರಡಿಸುವಂತೆ ಹಾಗೂ ಈ ಮಾರ್ಗಸೂಚಿಗಳನ್ನು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಪ್ರಮಾಣಪತ್ರವಾಗಿ (Affidavit) ಸಲ್ಲಿಸುವಂತೆಯೂ ಸೂಚಿಸಿರುವುದಾಗಿ ತಿಳಿಸಿರುತ್ತಾರೆ.

ಈ ಸೂಚನೆಯನ್ನು ಪಾಲಿಸಲು ಅಂಗವಿಕಲ ಅಭ್ಯರ್ಥಿಗಳಿಗೆ ಯಾವ ಯಾವ ವೈದ್ಯಕೀಯ ಸ್ನಾತ್ತಕೋತ್ತರ ಡಿಗ್ರಿ / ಡಿಪ್ಲೊಮಾ ಸೀಟುಗಳನ್ನು ನೀಡಬೇಕೆಂದು ನಿರ್ಧರಿಸಲು ದಿನಾಂಕ: 18–04–2012 ರಂದು ಪ್ರಧಾನ ಕಾರ್ಯದರ್ಶಿಗಳು, ವೈದ್ಯಕೀಯ ಶಿಕ್ಷಣ ಇವರ ಅಧ್ಯಕ್ಷತೆಯಲ್ಲಿ ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನಾ ಸಂಸ್ಥೆಯಲ್ಲಿನ ವೈದ್ಯಕೀಯ ವಿಷಯಕ್ಕೆ ಸಂಬಂಧಿಸಿದ ಎಲ್ಲಾ ವಿಭಾಗಗಳ ಮುಖ್ಯಸ್ಥರ ಸಭೆಯನ್ನು ಏರ್ಪಡಿಸಿದ್ದು, ಈ ಸಭೆಯಲ್ಲಿ ವಿಭಾಗದ ಮುಖ್ಯಸ್ಥರುಗಳು ಪ್ರಿ–ಕ್ಲಿನಿಕಲ್ ಹಾಗೂ ಪ್ಯಾರಾ–ಕ್ಲಿನಿಕಲ್ ವಿಷಯಗಳಲ್ಲಿ ಅಂಗವಿಕಲ ಅಭ್ಯರ್ಥಿಗಳಿಗೆ ಎಲ್ಲಾ ಸ್ನಾತ್ತಕೋತ್ತರ ಡಿಗ್ರಿ / ಡಿಪ್ಲೊಮಾ ಸೀಟುಗಳನ್ನು ನೀಡಬಹುದೆಂದು ಅಭಿಪ್ರಾಯಪಟ್ಟಿರುತ್ತಾರೆಂದು ತಿಳಿಸುತ್ತಾ ಕ್ಲಿನಿಕಲ್ ವಿಭಾಗಗಳಲ್ಲಿ ಚರ್ಮ ಹಾಗೂ ಲೈಂಗಿಕ ರೋಗಗಳ ವಿಭಾಗ, ರೇಡಿಯೋಥೆರಪಿ ವಿಭಾಗ, ಶಿಶುವೈದ್ಯ ಶಾಸ್ತ್ರ ವಿಭಾಗ, ವೈದ್ಯಶಾಸ್ತ್ರ ವಿಭಾಗ, ಕ್ಷ–ಕಿರಣ ವಿಭಾಗ, ಮನೋರೋಗಶಾಸ್ತ್ರ ವಿಭಾಗ ಮತ್ತು ಕ್ಷಯ ಹಾಗೂ ಎದೆರೋಗ ವಿಭಾಗಗಳಲ್ಲಿ ಅಂಗವಿಕಲ ವಿದ್ಯಾರ್ಥಿಗಳಿಗೆ ಸ್ನಾತ್ತಕೋತ್ತರ ಡಿಗ್ರಿ / ಡಿಪ್ಲೊಮಾ ಸೀಟುಗಳನ್ನು ನೀಡಬಹುದೆಂದು ಆಯಾ ವಿಭಾಗಗಳ ಮುಖ್ಯಸ್ಥರು ಅಭಿಪ್ರಾಯಪಟ್ಟಿರುತ್ತಾರೆಂದು ತಿಳಿಸಿ ಶಸ್ತ್ರಚಿಕಿತ್ಸಾ ವಿಭಾಗ, ನೇತ್ರಶಾಸ್ತ್ರ ವಿಭಾಗ, ಅಸ್ಥಿ ಚಿಕಿತ್ಸಾ ವಿಭಾಗ, ಇ.ಎನ್.ಟಿ. ವಿಭಾಗ, ಅರವಳಿಕೆ ಶಾಸ್ತ್ರ ವಿಭಾಗ ಮತ್ತು ಪ್ರಸೂತಿ ಮತ್ತು ಸ್ತ್ರೀರೋಗ ವಿಭಾಗದ ಮುಖ್ಯಸ್ಥರುಗಳು ಅಂಗವಿಕಲ ಅಭ್ಯರ್ಥಿಗಳಿಗೆ ಈ ವಿಭಾಗಗಳಲ್ಲಿ ಕಾರ್ಯನಿರ್ವಹಿಸುವುದು ಕಷ್ಟಕರವಾಗುವುದೆಂಬ ಕಾರಣಗಳನ್ನು ನೀಡಿದ್ದು, ಈ ವಿಭಾಗಗಳಲ್ಲಿ ಅಂಗವಿಕಲ ಅಭ್ಯರ್ಥಿಗಳಿಗೆ ಸ್ನಾತ್ತಕೋತ್ತರ ಡಿಗ್ರಿ / ಡಿಪ್ಲೊಮಾ ಸೀಟುಗಳನ್ನು ನೀಡುವುದು ಸೂಕ್ತವಲ್ಲವೆಂದು ಅಭಿಪ್ರಾಯಪಟ್ಟಿರುವುದಾಗಿ ಸಹ ಸದರಿ ಪತ್ರದಲ್ಲಿ ವೈದ್ಯಕೀಯ ಶಿಕ್ಷಣ ನಿರ್ದೇಶಕರು ತಿಳಿಸಿರುತ್ತಾರೆ

ಮೇಲೆ ತಿಳಿಸಿದ ಅಂಶಗಳ ಹಿನ್ನಲೆಯಲ್ಲಿ ಪಿ.ಜಿ.ಇ.ಟಿ. ಸೀಟ್‌ಮ್ಯಾಟ್ರಿಕ್ಸ್‌ನ್ನು ತಯಾರಿಸುವಾಗ ಅಂಗವಿಕಲ ಅಭ್ಯರ್ಥಿಗಳಿಗೆ ಮೀಸಲಾತಿ ನೀಡುವ ಸಂಬಂಧ ಕೆಳಕಂಡ ಮಾರ್ಗಸೂಚಿಗಳನ್ನು ಅನುಸರಿಸಬಹುದೆಂದು ವೈದ್ಯಕೀಯ ಶಿಕ್ಷಣ ನಿರ್ದೇಶಕರು ಅಭಿಪ್ರಾಯಪಟ್ಟಿರುತ್ತಾರೆ.

1) ಅಂಗವಿಕಲ ಅಭ್ಯರ್ಥಿಗಳಿಗೆ ಪಿ.ಜಿ.ಇ.ಟಿ. ಕೌನ್ಸಿಲಿಂಗ್ ಸಮಯದಲ್ಲಿ ಪ್ರತ್ಯೇಕ ಸೀಟ್ ಮ್ಯಾಟ್ರಿಕ್ಸ್‌ನ್ನು ತಯಾರಿಸುವುದು.

2) ಅಂಗವಿಕಲ ಅಭ್ಯರ್ಥಿಗಳ ಕೌನ್ಸಿಲಿಂಗ್‌ನ್ನು, ಪ್ರಥಮ ಸುತ್ತಿನ ಮೊದಲನೇ ದಿನದಲ್ಲಿ ನಡೆಸುವುದು.

3) ಪ್ರಿ–ಕ್ಲಿನಿಕಲ್ ವಿಭಾಗಗಳಾದ ಅನಾಟಮಿ, ಫಿಸಿಯಾಲಜಿ, ಮತ್ತು ಬಯೋಕೆಮಿಸ್ಟ್ರಿ ವಿಭಾಗಗಳಲ್ಲಿ ಒಟ್ಟು ಲಭ್ಯವಿರುವ ಸೀಟುಗಳ ಪೈಕಿ 3% ಸೀಟುಗಳನ್ನು ಅಂಗವಿಕಲ ಅಭ್ಯರ್ಥಿಗಳಿಗೆ ಮೀಸಲಿಡುವುದು.

4) ಪ್ಯಾರಾ ಕ್ಲಿನಿಕಲ್ ವಿಭಾಗಗಳಾದ ಫಾರ್ಮಾಕಾಲಜಿ, ಪೆಥಾಲಜಿ, ಮೈಕ್ರೋ ಬಯಾಲಜಿ, ಕಮ್ಯುನಿಟಿ ಮೆಡಿಸನ್ ಮತ್ತು ಫೊರೆನ್ಸಿಕ್ ಮೆಡಿಸನ್ ವಿಭಾಗಗಳಲ್ಲಿ ಒಟ್ಟು ಲಭ್ಯವಿರುವ ಸ್ನಾತ್ತಕೋತ್ತರ ಡಿಗ್ರಿ / ಡಿಪ್ಲೊಮಾ ಸೀಟುಗಳ ಪೈಕಿ 3% ಸೀಟುಗಳನ್ನು ಅಂಗವಿಕಲ ಅಭ್ಯರ್ಥಿಗಳಿಗೆ ಮೀಸಲಿಡುವುದು.

5) ಕ್ಲಿನಿಕಲ್ ವಿಭಾಗಗಳಾದ ಡರ್ಮಿಟಾಲಜಿ, ರೆಡಿಯೋಥೆರಪಿ, ಪೀಡಿಯಾಟ್ರಿಕ್ಸ್, ಜನರಲ್ ಮೆಡಿಸನ್, ರೇಡಿಯೋ ಡಯಾಗ್ನೋಸಿಸ್, ಸೈಕಿಯಾಟ್ರಿ ಮತ್ತು ಪಲ್ಮನರಿ ಮೆಡಿಸನ್ ವಿಭಾಗಗಳಲ್ಲಿ ಒಟ್ಟು ಲಭ್ಯವಿರುವ ಸ್ನಾತ್ತಕೋತ್ತರ ಡಿಗ್ರಿ / ಡಿಪ್ಲೊಮಾ ಸೀಟುಗಳ ಪೈಕಿ 3% ಸೀಟುಗಳನ್ನು ಅಂಗವಿಕಲ ಅಭ್ಯರ್ಥಿಗಳಿಗೆ ಮೀಸಲಿಡುವುದು.

6) ಮುಂಬರುವ ವರ್ಷಗಳಲ್ಲಿ ಅಂಗವಿಕಲ ಅಭ್ಯರ್ಥಿಗಳಿಗೆ ಮೇಲೆ ತಿಳಿಸಿದ ಪ್ರಿ–ಕ್ಲಿನಿಕಲ್, ಪ್ಯಾರಾ ಕ್ಲಿನಿಕಲ್ ಮತ್ತು ಕ್ಲಿನಿಕಲ್ ವಿಭಾಗಗಳಲ್ಲಿ ಸರದಿಯಂತೆ (Rotation) ವಿಷಯವಾರು ಸೀಟುಗಳನ್ನು ಒದಗಿಸುವುದು.

7) ಶಸ್ತ್ರಚಿಕಿತ್ಸಾ ವಿಭಾಗ, ನೇತ್ರಶಾಸ್ತ್ರ ವಿಭಾಗ, ಅಸ್ಥಿ ಚಿಕಿತ್ಸಾ ವಿಭಾಗ, ಇ.ಎನ್.ಟಿ. ವಿಭಾಗ, ಅರವಳಿಕೆ ಶಾಸ್ತ್ರ ವಿಭಾಗ ಮತ್ತು ಪ್ರಸೂತಿ ಮತ್ತು ಸ್ತ್ರೀರೋಗ ವಿಭಾಗಗಳಲ್ಲಿ ಮೀಸಲಾತಿ ಇರುವುದಿಲ್ಲ.

ಮೇಲೆ ಹೇಳಿದ ಮಾರ್ಗಸೂಚಿಗಳನ್ನು ಪ್ರಸಕ್ತ ಸಾಲಿನಿಂದಲೇ ಅನುಸರಿಸಲು ಅನುಮತಿಸಿ ಈ ಬಗ್ಗೆ ಸರ್ಕಾರಿ ಆದೇಶವನ್ನು ಹೊರಡಿಸಬೇಕೆಂದು ವೈದ್ಯಕೀಯ ಶಿಕ್ಷಣ ನಿರ್ದೇಶಕರು ಕೋರಿರುತ್ತಾರೆ. ಆದ್ದರಿಂದ ಸರ್ಕಾರವು ಈ ಬಗ್ಗೆ ಕೂಲಂಕುಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ/85/ಆರ್‌ಜಿಯು/2012 ಬೆಂಗಳೂರು, ದಿನಾಂಕ: 20.04.2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ ಪಿ.ಜಿ.ಇ.ಟಿ. 2012 ರ ಕೌನ್ಸಿಲಿಂಗ್‌ನಲ್ಲಿ ಹಾಗೂ ಮುಂಬರುವ ವರ್ಷಗಳ ಪಿ.ಜಿ.ಇ.ಟಿ. ಕೌನ್ಸಿಲಿಂಗ್‌ಗಾಗಿ ಸೀಟ್ ಮ್ಯಾಟ್ರಿಕ್ಸ್‌ನ್ನು ತಯಾರು ಮಾಡುವಾಗ ಅಂಗವಿಕಲ ಅಭ್ಯರ್ಥಿಗಳಿಗೆ ಮೀಸಲಾತಿ ಒದಗಿಸುವ ಬಗ್ಗೆ ಕೆಳಕಂಡ ಮಾರ್ಗಸೂಚಿಗಳನ್ನು ಅಳವಡಿಸಲು ಆದೇಶಿಸಿದೆ.

1) ಅಂಗವಿಕಲ ಅಭ್ಯರ್ಥಿಗಳಿಗೆ ಪಿ.ಜಿ.ಇ.ಟಿ. ಕೌನ್ಸಿಲಿಂಗ್ ಸಮಯದಲ್ಲಿ ಪ್ರತ್ಯೇಕ ಸೀಟ್ ಮ್ಯಾಟ್ರಿಕ್ಸ್‌ನ್ನು ತಯಾರಿಸುವುದು.

2) ಅಂಗವಿಕಲ ಅಭ್ಯರ್ಥಿಗಳ ಕೌನ್ಸಿಲಿಂಗ್‌ನ್ನು ಪ್ರಥಮ ಸುತ್ತಿನ ಮೊದಲನೇ ದಿನದಲ್ಲಿ ನಡೆಸುವುದು.

3) ಪ್ರಿ–ಕ್ಲಿನಿಕಲ್ ವಿಭಾಗಗಳಾದ ಅನಾಟಮಿ, ಫಿಸಿಯಾಲಜಿ, ಮತ್ತು ಬಯೋಕೆಮಿಸ್ಟ್ರಿ ವಿಭಾಗಗಳಲ್ಲಿ ಒಟ್ಟು ಲಭ್ಯವಿರುವ ಸೀಟುಗಳ ಪೈಕಿ 3% ಸೀಟುಗಳನ್ನು ಅಂಗವಿಕಲ ಅಭ್ಯರ್ಥಿಗಳಿಗೆ ಮೀಸಲಿಡುವುದು.

4) ಪ್ಯಾರಾ ಕ್ಲಿನಿಕಲ್ ವಿಭಾಗಗಳಾದ ಫಾರ್ಮಾಕಾಲಜಿ, ಪೆಥಾಲಜಿ, ಮೈಕ್ರೋ ಬಯಾಲಜಿ, ಕಮ್ಯುನಿಟಿ ಮೆಡಿಸನ್ ಮತ್ತು ಫೊರೆನ್ಸಿಕ್ ಮೆಡಿಸನ್ ವಿಭಾಗಗಳಲ್ಲಿ ಒಟ್ಟು ಲಭ್ಯವಿರುವ ಸ್ನಾತ್ತಕೋತ್ತರ ಡಿಗ್ರಿ / ಡಿಪ್ಲೊಮಾ ಸೀಟುಗಳ ಪೈಕಿ 3% ಸೀಟುಗಳನ್ನು ಅಂಗವಿಕಲ ಅಭ್ಯರ್ಥಿಗಳಿಗೆ ಮೀಸಲಿಡುವುದು.

5) ಕ್ಲಿನಿಕಲ್ ವಿಭಾಗಗಳಾದ ಡರ್ಮಿಟಾಲಜಿ, ರೆಡಿಯೋಥೆರಪಿ, ಪೀಡಿಯಾಟ್ರಿಕ್ಸ್, ಜನರಲ್ ಮೆಡಿಸನ್, ರೇಡಿಯೋ ಡಯಾಗ್ನೋಸಿಸ್, ಸೈಕಿಯಾಟ್ರಿ ಮತ್ತು ಪಲ್ಮನರಿ ಮೆಡಿಸನ್ ವಿಭಾಗಗಳಲ್ಲಿ ಒಟ್ಟು ಲಭ್ಯವಿರುವ ಸ್ನಾತ್ತಕೋತ್ತರ ಡಿಗ್ರಿ / ಡಿಪ್ಲೊಮಾ ಸೀಟುಗಳ ಪೈಕಿ 3% ಸೀಟುಗಳನ್ನು ಅಂಗವಿಕಲ ಅಭ್ಯರ್ಥಿಗಳಿಗೆ ಮೀಸಲಿಡುವುದು.

6) ಮುಂಬರುವ ವರ್ಷಗಳಲ್ಲಿ ಅಂಗವಿಕಲ ಅಭ್ಯರ್ಥಿಗಳಿಗೆ ಮೇಲೆ ತಿಳಿಸಿದ ಪ್ರಿ–ಕ್ಲಿನಿಕಲ್, ಪ್ಯಾರಾ ಕ್ಲಿನಿಕಲ್ ಮತ್ತು ಕ್ಲಿನಿಕಲ್ ವಿಭಾಗಗಳಲ್ಲಿ ಸರದಿಯಂತೆ (Rotation) ವಿಷಯವಾರು ಸೀಟುಗಳನ್ನು ನೀಡುವುದು

7) ಶಸ್ತ್ರಚಿಕಿತ್ಸಾ ವಿಭಾಗ, ನೇತ್ರಶಾಸ್ತ್ರ ವಿಭಾಗ, ಅಸ್ಥಿ ಚಿಕಿತ್ಸಾ ವಿಭಾಗ, ಇ.ಎನ್.ಟಿ. ವಿಭಾಗ, ಅರವಳಿಕೆ ಶಾಸ್ತ್ರ ವಿಭಾಗ ಮತ್ತು ಪ್ರಸೂತಿ ಮತ್ತು ಸ್ತ್ರೀರೋಗ ವಿಭಾಗಗಳಲ್ಲಿ ಮೀಸಲಾತಿ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಸಾಯಿಬಾಬಾ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೈದ್ಯಕೀಯ ಶಿಕ್ಷಣ).

ಪಿ.ಆರ್. 1238

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** ಶ್ರೀ ಡಿ.ಎಸ್. ವಿಶ್ವನಾಥ್, ಹಿಂದಿನ ಜಂಟಿ ನಿರ್ದೇಶಕರು, ಪ್ರಸ್ತುತ ಐ.ಎ.ಎಸ್. ವ್ಯವಸ್ಥಾಪಕ ನಿರ್ದೇಶಕರು, ಕೆ.ಎಸ್.ಎಸ್.ಐ. ಡಿ.ಸಿ. ಬೆಂಗಳೂರು ಇವರಿಗೆ ಆಯ್ಕೆ ದರ್ಜೆ ವೇತನ ಶ್ರೇಣಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**

1) ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 31 ಎಸ್‌ಆರ್‌ಪಿ 2007(X), ದಿನಾಂಕ:14–08–2008
2) ಶ್ರೀ ಡಿ.ಎಸ್.ವಿಶ್ವನಾಥ್, ಜಿಲ್ಲಾಧಿಕಾರಿ, ಬಾಗಲಕೋಟೆ ರವರ ದಿನಾಂಕ:24.04.2010 ರ ಮನವಿ.
3) ಕೈಗಾರಿಕಾಭಿವೃದ್ಧಿ ಆಯುಕ್ತರ ಪತ್ರದ ಸಂಖ್ಯೆ:ಆಡಳಿತ/ಸಿಬ್ಬಂದಿ/ಇ–2/88/2009–10 ದಿನಾಂಕ:06.08.2010
4) ದಿನಾಂಕ:14.03.2012 ರಂದು ನಡೆದ ಡಿ.ಪಿ.ಸಿ. ಸಭೆಯ ನಡವಳಿ.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 31 ಎಸ್‌ಆರ್‌ಪಿ 2007(X) ದಿ:14.08.2008 ರಲ್ಲಿ ವೇತನ ಶ್ರೇಣಿ ರೂ.20025–28275 ರಲ್ಲಿ ಕನಿಷ್ಠ 6 ವರ್ಷಗಳ ಸೇವೆಯನ್ನು ಪೂರೈಸಿದ "ಎ" ಗುಂಪಿನ ಅಧಿಕಾರಿಗಳಿಗೆ ರೂ.22125–30300 ಗಳ ಆಯ್ಕೆ ದರ್ಜೆ ವೇತನ ಶ್ರೇಣಿಯನ್ನು ಸದರಿ ಆದೇಶದಲ್ಲಿನ ಷರತ್ತಿಗೊಳಪಟ್ಟು ನೀಡಲು ಆದೇಶವಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಮನವಿಯಲ್ಲಿ ಶ್ರೀ ಡಿ.ಎಸ್. ವಿಶ್ವನಾಥ್, ಹಿಂದಿನ ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರು ವೇತನ ಶ್ರೇಣಿ ರೂ. 20025–28275 ರ ವ್ಯಾಪ್ತಿಯಲ್ಲಿದ್ದು ಹಾಗೂ 1993 ರಿಂದ 1999 ರವರೆಗೆ ಜಂಟಿ ನಿರ್ದೇಶಕರ ವೃಂದದಲ್ಲಿ 6 ವರ್ಷಗಳಿಗೂ ಮೇಲ್ಪಟ್ಟು ಕರ್ತವ್ಯ ನಿರ್ವಹಿಸಿದ್ದು, ತಮಗೂ ಸಹ ಆಯ್ಕೆ ವೇತನ ಶ್ರೇಣಿಯನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ:(3) ರ ಪತ್ರದಲ್ಲಿ ಕೈಗಾರಿಕಾಭಿವೃದ್ಧಿ ಆಯುಕ್ತರು, ಶ್ರೀ ಡಿ.ಎಸ್. ವಿಶ್ವನಾಥ್, ಹಿಂದಿನ ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರು ದಿನಾಂಕ:11.11.1993 ರಿಂದ ಜಂಟಿ ನಿರ್ದೇಶಕರಾಗಿ ನಿರ್ವಹಿಸಿದ್ದು, ಸದರಿಯವರ ಕಳೆದ 5 ವರ್ಷಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳನ್ನು ಸರ್ಕಾರಕ್ಕೆ ಸಲ್ಲಿಸಿ, ಆದೇಶ ಸಂಖ್ಯೆ: ಎಫ್‌ಡಿ 31 ಎಸ್‌ಆರ್‌ಪಿ 2007(X) ದಿನಾಂಕ: 14.08.2008 ರ ಅನ್ವಯ ಶ್ರೀಯುತರಿಗೆ ಆಯ್ಕೆ ದರ್ಜೆ ವೇತನ ಶ್ರೇಣಿ ರೂ.22125–30300 ಗಳನ್ನು ಮಂಜೂರು ಮಾಡಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ:(4) ರಲ್ಲಿ ಸದರಿ ಅಧಿಕಾರಿಯವರಿಗೆ ಆಯ್ಕೆ ದರ್ಜೆ ವೇತನ ಶ್ರೇಣಿಯನ್ನು ಮಂಜೂರು ಮಾಡುವ ಬಗ್ಗೆ ದಿನಾಂಕ:14,03.2012 ರಂದು ಇಲಾಖಾ ಮುಂಬಡ್ತಿ ಸಭೆ ನಡೆದಿದ್ದು, ಸದರಿ ಅಧಿಕಾರಿಯವರು ಜಂಟಿ ನಿರ್ದೇಶಕರ ಹುದ್ದೆಯಲ್ಲಿ 6 ವರ್ಷಗಳಿಗೂ ಮೇಲ್ಪಟ್ಟು ಸೇವೆ ಸಲ್ಲಿಸಿದ್ದು, ಮತ್ತು ಸದರಿ ಅಧಿಕಾರಿಯವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ/ಕ್ರಿಮಿನಲ್ ಮೊಕದ್ದಮೆ ಬಾಕಿ ಇಲ್ಲದಿರುವುದನ್ನು ಹಾಗೂ ಕಳೆದ 5 ವರ್ಷಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿ ತೃಪ್ತಿಕರವಾಗಿದ್ದು, ಈ ಅಂಶಗಳನ್ನು ಪರಿಶೀಲಿಸಿ, ಮತ್ತು ಗಮನಿಸಿ ಸದರಿ ಅಧಿಕಾರಿಯವರಿಗೆ ದಿನಾಂಕ:01.08.2008 ರಿಂದ ಆಯ್ಕೆ ದರ್ಜೆ ವೇತನ ಶ್ರೇಣಿ ರೂ.22125–30300 ಗಳನ್ನು ಮಂಜೂರು ಮಾಡಲು ಅರ್ಹರಾಗಿರುತ್ತಾರೆಂದು ಪರಿಗಣಿಸಲಾಗಿದೆ.

ಶ್ರೀ ಡಿ.ಎಸ್. ವಿಶ್ವನಾಥ್, ಹಿಂದಿನ ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಆಯ್ಕೆ ದರ್ಜೆ ವೇತನ ಶ್ರೇಣಿ ರೂ.22125–30300 ಗಳನ್ನು ಪಡೆಯಲು ಅರ್ಹರಾಗಿರುತ್ತಾರೆಂದು ಪರಿಗಣಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ವಾಕೈ 83 ಕೈಸೇವಿ 2010 ಬೆಂಗಳೂರು, ದಿನಾಂಕ:21–04–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಡಿ.ಎಸ್. ವಿಶ್ವನಾಥ್, ಹಿಂದಿನ ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಪ್ರಸ್ತುತ ಐ.ಎ.ಎಸ್. ವ್ಯವಸ್ಥಾಪಕ ನಿರ್ದೇಶಕರು, ಕೆ.ಎಸ್.ಎಸ್.ಐ.ಡಿ.ಸಿ.ಬೆಂಗಳೂರು ಇವರಿಗೆ ದಿ:01.08.2008 ರಿಂದ ಅನ್ವಯವಾಗುವಂತೆ ವೇತನ ಶ್ರೇಣಿ ರೂ. **20025–28275** ರಿಂದ ರೂ. **22125–30300** ಗಳ ಆಯ್ಕೆ ದರ್ಜೆ ವೇತನ ಶ್ರೇಣಿ ನೀಡಲು ಮಂಜೂರು ಮಾಡಿದೆ.

ಈ ಆದೇಶದನ್ವಯ ಮಂಜೂರು ಮಾಡಲಾಗಿರುವ ಆಯ್ಕೆ ದರ್ಜೆ ವೇತನ ಶ್ರೇಣಿಯಲ್ಲಿ ಈ ಅಧಿಕಾರಿಯ ವೇತನವನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು **1958 ರ ನಿಯಮ 42 (ಬಿ)**ರಲ್ಲಿ ಕಲ್ಪಿಸಿರುವ ಅವಕಾಶಗಳನ್ವಯ ನಿಗದಿಪಡಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 31 ಎಸ್‌ಆರ್‌ಪಿ 2007(X) ದಿ:14.08.2008 ರಲ್ಲಿ ಸಕ್ಷಮ ಪ್ರಾಧಿಕಾರಕ್ಕೆ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್.ಎಸ್. ವಾಸನ್,**

ಸರ್ಕಾರದ ಅಧೀನ ಕಾರ್ಯದರ್ಶಿ

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಸೇವೆಗಳು)

**ಪಿ.ಆರ್. 1267**

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** ಚಾಮರಾಜನಗರದಲ್ಲಿನ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಜಮೀನಿನಲ್ಲಿ ಚೆಕ್‌ಪೋಸ್ಟ್ ಮತ್ತು ವಿಶ್ರಾಂತಿ ಗೃಹ ನಿರ್ಮಾಣಕ್ಕಾಗಿ 2 ಎಕರೆ ಜಮೀನನ್ನು ಸಾರಿಗೆ ಇಲಾಖೆಗೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶನಾಲಯದ ಪತ್ರ ಸಂಖ್ಯೆ:ಕೈವಾಇ/ವಿಶ್ವ/ಎ1/ಚಾ.ನ/ಸ.ನಿ/47/2010–11, ದಿ:21.02.2011 ಮತ್ತು 25.02.2012.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ಚಾಮರಾಜನಗರ ತಾಲ್ಲೂಕಿನ ಪುಣಜನೂರು ಗ್ರಾಮದ ಸರ್ವೇ ನಂ.38/ಪಿ1, 38/ಪಿ2 ಮತ್ತು 38/ಪಿ3ರಲ್ಲಿ 8 ಎಕರೆ ಭೂಮಿಯನ್ನು ಜೇನು ಕೃಷಿ ಮತ್ತು ತೆಂಗಿನ ನಾರು ಉತ್ಪಾದನಾ ಉದ್ಯಮ ಸ್ಥಾಪಿಸಲು 1986–87ರಲ್ಲಿ ಖರೀದಿಸಿರುವುದಾಗಿ ತಿಳಿಸುತ್ತಾ, ಸದರಿ ಜಮೀನಿನಲ್ಲಿ ಒಂದು ವಿಶ್ವ ಕಾರ್ಯಗಾರವನ್ನು ನಿರ್ಮಿಸಿದ್ದು, 4 ಎಕರೆ ಭೂಮಿಯನ್ನು ತೆಂಗಿನ ನಾರು ಅಭಿವೃದ್ಧಿ ನಿಗಮಕ್ಕೆ ಬಿಟ್ಟುಕೊಟ್ಟಿರುವುದಾಗಿ ತಿಳಿಸಲಾಗಿದೆ. ಪ್ರಸ್ತುತ ವಿಶ್ವ ಕಾರ್ಯಗಾರವನ್ನು ತೆಂಗಿನ ನಾರು ಅಭಿವೃದ್ಧಿ ನಿಗಮಕ್ಕೆ ವಹಿಸಿದ್ದು, ತೆಂಗಿನ ನಾರು ಉತ್ಪಾದನಾ ಚಟುವಟಿಕೆ ನಡೆಯುತ್ತಿದ್ದು, ಉಳಿದ ಅರ್ಧ ಭಾಗದಲ್ಲಿ ಯಾವುದೇ ಕಾರ್ಯಚಟುವಟಿಕೆಗಳು ನಡೆಯುತ್ತಿಲ್ಲವೆಂದು ತಿಳಿಸಿರುತ್ತಾರೆ.

ಮುಂದುವರೆದು, ಸದರಿ ಜಮೀನು ಎನ್.ಹೆಚ್.209ರ ಪಕ್ಕದಲ್ಲಿರುವುದರಿಂದ ಚೆಕ್ ಪೋಸ್ಟ್ ಮತ್ತು ವಿಶ್ರಾಂತಿ ಗೃಹ ನಿರ್ಮಾಣಕ್ಕಾಗಿ 2 ಎಕರೆ ಜಮೀನನ್ನು ಬಿಟ್ಟುಕೊಡುವಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಕೋರಿರುವ ಮೇರೆಗೆ ಸದರಿ 2 ಎಕರೆ ಜಮೀನನ್ನು ಸಾರಿಗೆ ಇಲಾಖೆಗೆ ಬಿಟ್ಟುಕೊಡುವ ಬಗ್ಗೆ ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಚಾಮರಾಜನಗರ, ಇವರು ಶಿಫಾರಸ್ಸಿನೊಂದಿಗೆ ಸಲ್ಲಿಸಿದ್ದು, ಅದರಂತೆ, ಪ್ರಸ್ತುತ ನೋಂದಣೀ ಇಲಾಖೆಯ ಗೈಡೆನ್ಸ್ ವ್ಯಾಲ್ಯೂ ಪ್ರಕಾರ ಭೂಮಿಯ ಕಿಮ್ಮತ್ತು ತುಂಬಿಸಿಕೊಂಡು ಚಾಮರಾಜನಗರ ತಾಲ್ಲೂಕಿನ ಪುಣಜನೂರು ಗ್ರಾಮದ ಸರ್ವೇ ನಂ.38/ಪಿ1, 38/ಪಿ2 ಮತ್ತು 38/ಪಿ3ರಲ್ಲಿ ಖಾಲಿ ಇರುವ ಎರಡು ಎಕರೆ ಜಮೀನನ್ನು (ಸಾರಿಗೆ ಇಲಾಖೆಯು ಚೆಕ್ ಪೋಸ್ಟ್ ಮತ್ತು ವಿಶ್ರಾಂತಿ ಗೃಹ ನಿರ್ಮಾಣಕ್ಕಾಗಿ) ಸಾರಿಗೆ ಇಲಾಖೆಗೆ ಹಸ್ತಾಂತರಿಸುವ ಬಗ್ಗೆ ಆದೇಶ ಹೊರಡಿಸಲು ಅಪರ ನಿರ್ದೇಶಕರು (ವಿಶ್ವ) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ರವರು ಆಯುಕರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ರವರ ಅನುಮೋದನೆಯೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 06 ಕೈಯೋವಿ 2011, ಬೆಂಗಳೂರು, ದಿನಾಂಕ:21.04.2012**

ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ವ್ಯಾಪ್ತಿಯಲ್ಲಿನ ಚಾಮರಾಜನಗರ ತಾಲ್ಲೂಕಿನ ಪುಣಜನೂರು ಗ್ರಾಮದ ಸರ್ವೇ ನಂ.38/ಪಿ1, 38/ಪಿ2 ಮತ್ತು 38/ಪಿ3ರಲ್ಲಿ ಖಾಲಿ ಇರುವ ಎರಡು ಎಕರೆ ಜಮೀನನ್ನು ಪ್ರಸ್ತುತ ನೋಂದಣಿ ಇಲಾಖೆಯ ಗೈಡೆನ್ಸ್ ವ್ಯಾಲ್ಯೂ ಪ್ರಕಾರ ಭೂಮಿಯ ಮೌಲ್ಯ ತುಂಬಿಸಿಕೊಂಡು ಸಾರಿಗೆ ಇಲಾಖೆಯು ಚೆಕ್ ಪೋಸ್ಟ್ ಮತ್ತು ವಿಶ್ರಾಂತಿ ಗೃಹ ನಿರ್ಮಾಣಕ್ಕಾಗಿ ಸದರಿ ಜಮೀನನ್ನು ಸಾರಿಗೆ ಇಲಾಖೆಗೆ ಹಸ್ತಾಂತರಿಸಲು ಸರ್ಕಾರವು ಮಂಜೂರಾತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್.ಎಸ್. ವಾಸನ್,**
ಸರ್ಕಾರದ ಅಧೀನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಸೇವೆಗಳು)

**ಪಿ.ಆರ್. 1275**

## ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವಾಲಯ

**ವಿಷಯ:** ರಾಜ್ಯದ ಗ್ರಾಮ ಪಂಚಾಯತಿಗಳಲ್ಲಿ ಹೊಸದಾಗಿ ಸೃಜಿಸಿದ "ದ್ವಿತೀಯ ದರ್ಜೆ ಲೆಕ್ಕ ಸಹಾಯಕರ" ಹುದ್ದೆಗಳನ್ನು ಜಿಲ್ಲಾವಾರು ಮತ್ತು ತಾಲ್ಲೂಕುವಾರು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅದೇಶ ಸಂಖ್ಯೆ: ಗ್ರಾಅಪ 569 ಗ್ರಾಪಂಅ 2006, ದಿನಾಂಕ: 31–3–2008.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಗ್ರಾಅಪ 181 ಗ್ರಾಪಂಕಾ 2011, ದಿನಾಂಕ: 31–03–2012.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 31–3–2008 ರ ಸರ್ಕಾರದ ಆದೇಶದಲ್ಲಿ ಹೆಚ್ಚಿನ ಆಡಳಿತಾತ್ಮಕ ಹಾಗೂ ಆರ್ಥಿಕ ಜವಾಬ್ದಾರಿಯುಳ್ಳ ಗ್ರಾಮ ಪಂಚಾಯಿತಿಗಳಲ್ಲಿ ಅಂತಹ ಪ್ರತಿ ಗ್ರಾಮ ಪಂಚಾಯಿತಿಗೆ ತಲಾ ಒಂದು ಹುದ್ದೆಯಂತೆ ವೇತನ ಶ್ರೇಣಿ ₹ 5,800–10,500 ರಲ್ಲಿ 2500 ದ್ವಿತೀಯ ದರ್ಜೆ ಲೆಕ್ಕ ಸಹಾಯಕರ ಹುದ್ದೆಗಳನ್ನು ಸೃಜಿಸಲಾಗಿದೆ. ಈ ಹುದ್ದೆಗಳಿಗೆ ನೇಮಕಾತಿ ಮಾಡುವ ಬಗ್ಗೆ ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಅಧಿಸೂಚನೆಯಲ್ಲಿ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರೂಪಿಸಲಾಗಿದೆ.

ಈ ಹುದ್ದೆಗಳ ಪೈಕಿ 2165 ಹುದ್ದೆಗಳು ರಾಜ್ಯದಲ್ಲಿ ಹಾಲಿ ಅಸ್ತಿತ್ವದಲ್ಲಿರುವ ಗ್ರೇಡ್–1 ಗ್ರಾಮ ಪಂಚಾಯಿತಿಗಳಿಗೆ ಲಭ್ಯವಾಗುತ್ತವೆ. ಉಳಿದ 335 ಹುದ್ದೆಗಳ ಪೈಕಿ ಜಿಲ್ಲಾ ಪಂಚಾಯಿತಿ ವ್ಯಾಪ್ತಿಯಲ್ಲಿ ಬರುವ ಗ್ರೇಡ್–2 ಗ್ರಾಮ ಪಂಚಾಯಿತಿಗಳ ಸಂಖ್ಯೆಯ ಶೇಕಡ 10 ರಷ್ಟನ್ನು ಪ್ರತಿ ಜಿಲ್ಲೆಗೆ ನಿಗದಿಪಡಿಸಿ ಹಂಚಿಕೆ ಮಾಡಲು ಉದ್ದೇಶಿಸಿದೆ. ಹಾಗೂ ಶೇಕಡ 10 ರಂತೆ ಲಭ್ಯವಾಗುವ ಹೆಚ್ಚುವರಿ ಹುದ್ದೆಗಳನ್ನು ಸಮತೋಲನ ಕಾಯ್ದುಕೊಳ್ಳುವ ದೃಷ್ಟಿಯಿಂದ ತಾಲ್ಲೂಕುವಾರು ಸಮಾನವಾಗಿ ಹಂಚಲು ಸರ್ಕಾರವು ನಿರ್ಣಯಿಸಿದೆ.

ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 140 ಗ್ರಾಪಂಕಾ 2012, ಬೆಂಗಳೂರು, ದಿನಾಂಕ: 03–04–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಗ್ರಾಮ ಪಂಚಾಯಿತಿಗಳಲ್ಲಿ ಸೃಜಿಸಲಾಗಿರುವ 2500 ದ್ವಿತೀಯ ದರ್ಜೆ ಲೆಕ್ಕ ಸಹಾಯಕರ ಹುದ್ದೆಗಳನ್ನು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದ–1 ಮತ್ತು 2 ರಲ್ಲಿರುವಂತೆ ಜಿಲ್ಲಾವಾರು ಮತ್ತು ತಾಲ್ಲೂಕುವಾರು ಹಂಚಿಕೆ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಬಿ. ರಘುನಾಥ್,**
ಸರ್ಕಾರದ ಅಧೀನ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 140 ಗ್ರಾಪಂಕಾ 2012, ದಿನಾಂಕ: 03–04–2012 ಕ್ಕೆ ಅನುಬಂಧ–1**

**ಗ್ರಾಮ ಪಂಚಾಯಿತಿಗಳಿಗೆ ಮಂಜೂರಾಗಿರುವ ದ್ವಿತೀಯ ದರ್ಜೆ ಲೆಕ್ಕ ಸಹಾಯಕರ ಹುದ್ದೆಗಳ ಜಿಲ್ಲಾವಾರು ವಿವರ**

| ಕ್ರಮ ಸಂಖ್ಯೆ | ಜಿಲ್ಲಾ ಪಂಚಾಯಿತಿ | ಮಂಜೂರಾದ ಹುದ್ದೆಗಳ ಸಂಖ್ಯೆ | ಶೇಕಡಾ 70 ರ ನೇರ ನೇಮಕಾತಿ ಕೋಟಾದ ಹುದ್ದೆಗಳು | ಶೇಕಡಾ 30 ರ ಬಿಲ್ ಕಲೆಕ್ಟರ್ ಇತ್ಯಾದಿ ವೃಂದದ ನೇರ ನೇಮಕಾತಿ ಕೋಟಾದ ಹುದ್ದೆಗಳು |
|---|---|---|---|---|
| 1 | ಬೆಂಗಳೂರು ನಗರ | 48 | 34 | 14 |
| 2 | ಬೆಂಗಳೂರು ಗ್ರಾಮಾಂತರ | 51 | 36 | 15 |
| 3 | ಬಾಗಲಕೋಟೆ | 70 | 49 | 21 |
| 4 | ಬೆಳಗಾವಿ | 207 | 145 | 62 |
| 5 | ಬಳ್ಳಾರಿ | 80 | 56 | 24 |
| 6 | ಬೀದರ್ | 69 | 48 | 21 |
| 7 | ಬಿಜಾಪುರ | 102 | 71 | 31 |
| 8 | ಚಿಕ್ಕಮಗಳೂರು | 90 | 63 | 27 |
| 9 | ಚಿತ್ರದುರ್ಗ | 100 | 70 | 30 |
| 10 | ಚಾಮರಾಜನಗರ | 68 | 48 | 20 |
| 11 | ದಕ್ಷಿಣ ಕನ್ನಡ | 84 | 59 | 25 |
| 12 | ದಾವಣಗೆರೆ | 70 | 49 | 21 |
| 13 | ಧಾರವಾಡ | 38 | 26 | 12 |
| 14 | ಗದಗ | 47 | 33 | 14 |
| 15 | ಗುಲ್ಬರ್ಗಾ | 99 | 69 | 30 |
| 16 | ಹಾಸನ | 86 | 60 | 26 |
| 17 | ಹಾವೇರಿ | 83 | 58 | 25 |
| 18 | ಕೊಡಗು | 37 | 26 | 11 |
| 19 | ಕೋಲಾರ | 57 | 40 | 17 |
| 20 | ಕೊಪ್ಪಳ | 58 | 41 | 17 |
| 21 | ಮಂಡ್ಯ | 126 | 88 | 38 |
| 22 | ಮೈಸೂರು | 149 | 104 | 45 |
| 23 | ರಾಯಚೂರು | 86 | 60 | 26 |
| 24 | ಶಿವಮೊಗ್ಗ | 104 | 73 | 31 |

| ಕ್ರಮ ಸಂಖ್ಯೆ | ಜಿಲ್ಲಾ ಪಂಚಾಯಿತಿ | ಮಂಜೂರಾದ ಹುದ್ದೆಗಳ ಸಂಖ್ಯೆ | ಶೇಕಡಾ 70 ರ ನೇರ ನೇಮಕಾತಿ ಕೋಟಾದ ಹುದ್ದೆಗಳು | ಶೇಕಡಾ 30 ರ ಬಿಲ್ ಕಲೆಕ್ಟರ್ ಇತ್ಯಾದಿ ವೃಂದದ ನೇರ ನೇಮಕಾತಿ ಕೋಟಾದ ಹುದ್ದೆಗಳು |
|---|---|---|---|---|
| 25 | ತುಮಕೂರು | 172 | 120 | 52 |
| 26 | ಉತ್ತರ ಕನ್ನಡ | 82 | 57 | 25 |
| 27 | ಉಡುಪಿ | 69 | 48 | 21 |
| 28 | ರಾಮನಗರ | 73 | 51 | 22 |
| 29 | ಚಿಕ್ಕಬಳ್ಳಾಪುರ | 51 | 36 | 15 |
| 30 | ಯಾದಗಿರಿ | 44 | 31 | 13 |
| | **ಒಟ್ಟು** | **2500** | **1750** | **750** |

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 140 ಗ್ರಾಪಂಕಾ 2012, ದಿನಾಂಕ: 03–04–2012ಕ್ಕೆ ಅನುಬಂಧ–2**

**ರಾಜ್ಯದ ಗ್ರಾಮ ಪಂಚಾಯಿತಿಗಳಿಗೆ ಮಂಜೂರಾಗಿರುವ ತಾಲ್ಲೂಕುವಾರು ದ್ವಿತೀಯ ದರ್ಜೆ ಲೆಕ್ಕ ಸಹಾಯಕರ ಹುದ್ದೆಗಳ ವಿವರ**

| ಕ್ರ. ಸಂ. | ಜಿಲ್ಲೆಯ ಹೆಸರು | ತಾಲ್ಲೂಕು | ಪ್ರತಿ ಜಿಲ್ಲೆ/ತಾಲ್ಲೂಕಿಗೆ ಹಂಚಿಕೆಯಾದ ದ್ವಿತೀಯ ದರ್ಜೆ ಲೆಕ್ಕ ಸಹಾಯಕರ ಹುದ್ದೆಗಳ ಒಟ್ಟು ಸಂಖ್ಯೆ |
|---|---|---|---|
| 1 | ಬಾಗಲಕೋಟೆ | ಬಾಗಲಕೋಟೆ | 8 |
| | | ಹುನಗುಂದ | 15 |
| | | ಮುಧೋಳ | 12 |
| | | ಬಾದಾಮಿ | 14 |
| | | ಜಮಖಂಡಿ | 17 |
| | | ಬಿಳಗಿ | 4 |
| | | **ಒಟ್ಟು** | **70** |
| 2 | ಬೆಂಗಳೂರು (ಗ್ರಾ) | ದೇವನಹಳ್ಳಿ | 9 |
| | | ದೊಡ್ಡಬಳ್ಳಾಪುರ | 17 |
| | | ಹೊಸಕೋಟೆ | 18 |
| | | ನೆಲಮಂಗಲ | 7 |
| | | **ಒಟ್ಟು** | **51** |
| 3 | ಬೆಂಗಳೂರು (ನಗರ) | ಬೆಂಗಳೂರು (ದಕ್ಷಿಣ) | 8 |
| | | ಬೆಂಗಳೂರು (ಪೂರ್ವ) | 7 |
| | | ಬೆಂಗಳೂರು (ಉ) | 16 |
| | | ಅನೇಕಲ್ | 17 |
| | | **ಒಟ್ಟು** | **48** |
| 4 | ಬೆಳಗಾವಿ | ಬೆಳಗಾವಿ | 27 |
| | | ಖಾನಾಪುರ | 10 |
| | | ಬೈಲಹೊಂಗಲ | 19 |
| | | ಸವದತ್ತಿ | 18 |
| | | ರಾಮದುರ್ಗ | 9 |
| | | ಹುಕ್ಕೇರಿ | 15 |

| ಕ್ರ. ಸಂ. | ಜಿಲ್ಲೆಯ ಹೆಸರು | ತಾಲ್ಲೂಕು | ಪ್ರತಿ ಜಿಲ್ಲೆ/ತಾಲ್ಲೂಕಿಗೆ ಹಂಚಿಕೆಯಾದ ದ್ವಿತೀಯ ದರ್ಜೆ ಲೆಕ್ಕ ಸಹಾಯಕರ ಹುದ್ದೆಗಳ ಒಟ್ಟು ಸಂಖ್ಯೆ |
|---|---|---|---|
| | | ಗೋಕಾಕ | 30 |
| | | ಚಿಕ್ಕೋಡಿ | 33 |
| | | ರಾಯಬಾಗ | 19 |
| | | ಅಥಣಿ | 27 |
| | | **ಒಟ್ಟು** | **207** |
| 5 | ಬಳ್ಳಾರಿ | ಬಳ್ಳಾರಿ | 17 |
| | | ಹೊಸಪೇಟೆ | 8 |
| | | ಸಂಡೂರು | 12 |
| | | ಕೂಡ್ಲಿಗಿ | 15 |
| | | ಶಿರಗುಪ್ಪ | 7 |
| | | ಹಗರಿಬೊಮ್ಮನಹಳ್ಳಿ | 11 |
| | | ಹೂವಿನ ಹಡಗಲಿ | 10 |
| | | **ಒಟ್ಟು** | **80** |
| 6 | ಬೀದರ್ | ಬೀದರ್ | 15 |
| | | ಔರಾದ್ | 9 |
| | | ಭಾಲ್ಕಿ | 13 |
| | | ಹುಮ್ನಾಬಾದ್ | 17 |
| | | ಬಸವಕಲ್ಯಾಣ | 15 |
| | | **ಒಟ್ಟು** | **69** |
| 7 | ಬಿಜಾಪುರ | ಬಿಜಾಪುರ | 21 |
| | | ಬಸವನ ಬಾಗೇವಾಡಿ | 17 |
| | | ಮುದ್ದೆಬಿಹಾಳ್ | 14 |
| | | ಇಂಡಿ | 25 |
| | | ಸಿಂದಗಿ | 25 |
| | | **ಒಟ್ಟು** | **102** |
| 8 | ಚಾಮರಾಜನಗರ | ಚಾಮರಾಜನಗರ | 26 |
| | | ಗುಂಡ್ಲುಪೇಟೆ | 13 |
| | | ಕೊಳ್ಳೇಗಾಲ | 22 |
| | | ಯಳಂದೂರು | 7 |
| | | **ಒಟ್ಟು** | **68** |
| 9 | ಚಿಕ್ಕಮಗಳೂರು | ಚಿಕ್ಕಮಗಳೂರು | 20 |
| | | ಕಡೂರು | 22 |
| | | ಕೊಪ್ಪ | 7 |
| | | ಮೂಡಿಗೆರೆ | 12 |
| | | ನರಸಿಂಹರಾಜಪುರ | 4 |

| ಕ್ರ. ಸಂ. | ಜಿಲ್ಲೆಯ ಹೆಸರು | ತಾಲ್ಲೂಕು | ಪ್ರತಿ ಜಿಲ್ಲೆ/ತಾಲ್ಲೂಕಿಗೆ ಹಂಚಿಕೆಯಾದ ದ್ವಿತೀಯ ದರ್ಜೆ ಲೆಕ್ಕ ಸಹಾಯಕರ ಹುದ್ದೆಗಳ ಒಟ್ಟು ಸಂಖ್ಯೆ |
|---|---|---|---|
| | | ಶೃಂಗೇರಿ | 4 |
| | | ತರೀಕೆರೆ | 21 |
| | | **ಒಟ್ಟು** | **90** |
| 10 | ಚಿತ್ರದುರ್ಗ | ಚಿತ್ರದುರ್ಗ | 22 |
| | | ಚಳ್ಳಕೆರೆ | 23 |
| | | ಹೊಳಲ್ಕೆರೆ | 13 |
| | | ಹಿರಿಯೂರು | 17 |
| | | ಹೊಸದುರ್ಗ | 13 |
| | | ಮೊಳಕಾಲ್ಮೂರು | 12 |
| | | **ಒಟ್ಟು** | **100** |
| 11 | ದಕ್ಷಿಣ ಕನ್ನಡ | ಬಂಟ್ವಾಳ | 23 |
| | | ಬೆಳ್ತಂಗಡಿ | 12 |
| | | ಮಂಗಳೂರು | 30 |
| | | ಪುತ್ತೂರು | 14 |
| | | ಸುಳ್ಯ | 5 |
| | | **ಒಟ್ಟು** | **84** |
| 12 | ದಾವಣಗೆರೆ | ದಾವಣಗೆರೆ | 14 |
| | | ಹರಿಹರ | 12 |
| | | ಹರಪನಹಳ್ಳಿ | 18 |
| | | ಜಗಳೂರು | 8 |
| | | ಚನ್ನಗಿರಿ | 12 |
| | | ಹೊನ್ನಾಳಿ | 6 |
| | | **ಒಟ್ಟು** | **70** |
| 13 | ಧಾರವಾಡ | ಧಾರವಾಡ | 10 |
| | | ಹುಬ್ಬಳ್ಳಿ | 9 |
| | | ಕಲಘಟಗಿ | 6 |
| | | ಕುಂದಗೋಳ | 7 |
| | | ನವಲಗುಂದ | 6 |
| | | **ಒಟ್ಟು** | **38** |
| 14 | ಗದಗ | ಗದಗ | 12 |
| | | ಮುಂಡರಗಿ | 8 |
| | | ನರಗುಂದ | 4 |
| | | ರೋಣ | 16 |
| | | ಶಿರಹಟ್ಟಿ | 7 |
| | | **ಒಟ್ಟು** | **47** |

| ಕ್ರ. ಸಂ. | ಜಿಲ್ಲೆಯ ಹೆಸರು | ತಾಲ್ಲೂಕು | ಪ್ರತಿ ಜಿಲ್ಲೆ/ತಾಲ್ಲೂಕಿಗೆ ಹಂಚಿಕೆಯಾದ ದ್ವಿತೀಯ ದರ್ಜೆ ಲೆಕ್ಕ ಸಹಾಯಕರ ಹುದ್ದೆಗಳ ಒಟ್ಟು ಸಂಖ್ಯೆ |
|---|---|---|---|
| 15 | ಗುಲ್ಬರ್ಗಾ | ಜೇವರ್ಗಿ | 8 |
| | | ಸೇಡಂ | 8 |
| | | ಆಳಂದ | 26 |
| | | ಚಿಂಚೋಳಿ | 10 |
| | | ಚಿತಾಪುರ | 17 |
| | | ಗುಲ್ಬರ್ಗ | 16 |
| | | ಅಫಜಲ ಪುರ | 14 |
| | | **ಒಟ್ಟು** | **99** |
| 16 | ಹಾಸನ | ಆಲೂರು | 5 |
| | | ಅರಕಲಗೂಡು | 13 |
| | | ಅರಸೀಕೆರೆ | 14 |
| | | ಬೇಲೂರು | 8 |
| | | ಚನ್ನರಾಯ ಪಟ್ಟಣ | 19 |
| | | ಹಾಸನ | 16 |
| | | ಹೊಳೆ ನರಸೀಪುರ | 8 |
| | | ಸಕಲೇಶಪುರ | 3 |
| | | **ಒಟ್ಟು** | **86** |
| 17 | ಹಾವೇರಿ | ಬ್ಯಾಡಗಿ | 6 |
| | | ಹಾನಗಲ್ | 15 |
| | | ಹಾವೇರಿ | 15 |
| | | ರಾಣೆ ಬೆನ್ನೂರು | 23 |
| | | ಹಿರೆ ಕೆರೂರು | 12 |
| | | ಸವಣೂರು | 5 |
| | | ಶಿಗ್ಗಾಂವ್ | 7 |
| | | **ಒಟ್ಟು** | **83** |
| 18 | ಕೊಡಗು | ಮಡಿಕೇರಿ | 9 |
| | | ಸೋಮವಾರಪೇಟೆ | 15 |
| | | ವೀರಾಜಪೇಟೆ (ಪೊನ್ನಂಪೇಟೆ) | 13 |
| | | **ಒಟ್ಟು** | **37** |
| 19 | ಕೋಲಾರ | ಕೋಲಾರ | 16 |
| | | ಮಾಲೂರು | 7 |
| | | ಬಂಗಾರಪೇಟೆ | 12 |
| | | ಮುಳಬಾಗಿಲು | 11 |
| | | ಶ್ರೀನಿವಾಸಪುರ | 11 |
| | | **ಒಟ್ಟು** | **57** |

| ಕ್ರ. ಸಂ. | ಜಿಲ್ಲೆಯ ಹೆಸರು | ತಾಲ್ಲೂಕು | ಪ್ರತಿ ಜಿಲ್ಲೆ/ತಾಲ್ಲೂಕಿಗೆ ಹಂಚಿಕೆಯಾದ ದ್ವಿತೀಯ ದರ್ಜೆ ಲೆಕ್ಕ ಸಹಾಯಕರ ಹುದ್ದೆಗಳ ಒಟ್ಟು ಸಂಖ್ಯೆ |
|---|---|---|---|
| 20 | ಕೊಪ್ಪಳ | ಕೊಪ್ಪಳ | 15 |
| | | ಯಲಬುರ್ಗ | 9 |
| | | ಕುಷ್ಟಗಿ | 13 |
| | | ಗಂಗಾವತಿ | 21 |
| | | **ಒಟ್ಟು** | **58** |
| 21 | ಮಂಡ್ಯ | ಕೃಷ್ಣರಾಜಪೇಟೆ | 18 |
| | | ಮದ್ದೂರು | 23 |
| | | ಮಳವಳ್ಳಿ | 20 |
| | | ಮಂಡ್ಯ | 22 |
| | | ನಾಗಮಂಗಲ | 16 |
| | | ಪಾಂಡವಪುರ | 16 |
| | | ಶ್ರೀರಂಗಪಟ್ಟಣ | 11 |
| | | **ಒಟ್ಟು** | **126** |
| 22 | ಮೈಸೂರು | ಹೆಗ್ಗಡದೇವನಕೋಟೆ | 20 |
| | | ಹುಣಸೂರು | 14 |
| | | ಕೃಷ್ಣರಾಜನಗರ | 16 |
| | | ಮೈಸೂರು | 31 |
| | | ನಂಜನಗೂಡು | 29 |
| | | ಪಿರಿಯಾಪಟ್ಟಣ | 17 |
| | | ಟಿ. ನರಸೀಪುರ | 22 |
| | | **ಒಟ್ಟು** | **149** |
| 23 | ರಾಯಚೂರು | ರಾಯಚೂರು | 14 |
| | | ದೇವದುರ್ಗ | 12 |
| | | ಮಾನ್ವಿ | 23 |
| | | ಲಿಂಗಸುಗೂರು | 12 |
| | | ಸಿಂಧನೂರು | 25 |
| | | **ಒಟ್ಟು** | **86** |
| 24 | ಶಿವಮೊಗ್ಗ | ಶಿವಮೊಗ್ಗ | 20 |
| | | ಭದ್ರಾವತಿ | 21 |
| | | ತೀರ್ಥಹಳ್ಳಿ | 8 |
| | | ಸಾಗರ | 11 |
| | | ಸೊರಬ | 19 |

| ಕ್ರ. ಸಂ. | ಜಿಲ್ಲೆಯ ಹೆಸರು | ತಾಲ್ಲೂಕು | ಪ್ರತಿ ಜಿಲ್ಲೆ/ತಾಲ್ಲೂಕಿಗೆ ಹಂಚಿಕೆಯಾದ ದ್ವಿತೀಯ ದರ್ಜೆ ಲೆಕ್ಕ ಸಹಾಯಕರ ಹುದ್ದೆಗಳ ಒಟ್ಟು ಸಂಖ್ಯೆ |
|---|---|---|---|
| | | ಶಿಕಾರಿಪುರ | 15 |
| | | ಹೊಸನಗರ | 10 |
| | | **ಒಟ್ಟು** | **104** |
| 25 | ತುಮಕೂರು | ತುಮಕೂರು | 17 |
| | | ಗುಬ್ಬಿ | 28 |
| | | ಕುಣಿಗಲ್ | 20 |
| | | ಚಿಕ್ಕನಾಯಕನಹಳ್ಳಿ | 20 |
| | | ತಿಪಟೂರು | 10 |
| | | ಶಿರಾ | 24 |
| | | ಪಾವಗಡ | 14 |
| | | ಮಧುಗಿರಿ | 18 |
| | | ಕೊರಟಗೆರೆ | 10 |
| | | ತುರುವೇಕೆರೆ | 11 |
| | | **ಒಟ್ಟು** | **172** |
| 26 | ಉಡುಪಿ | ಕಾರ್ಕಳ | 31 |
| | | ಕುಂದಾಪುರ | 25 |
| | | ಉಡುಪಿ | 13 |
| | | **ಒಟ್ಟು** | **69** |
| 27 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | 8 |
| | | ಚಿಂತಾಮಣಿ | 8 |
| | | ಚಿಕ್ಕಬಳ್ಳಾಪುರ | 6 |
| | | ಗುಡಿಬಂಡೆ | 4 |
| | | ಗೌರಿಬಿದನೂರು | 21 |
| | | ಶಿಡ್ಲಘಟ್ಟ | 4 |
| | | **ಒಟ್ಟು** | **51** |
| 28 | ರಾಮನಗರ | ಚನ್ನಪಟ್ಟಣ | 18 |
| | | ಕನಕಪುರ | 30 |
| | | ಮಾಗಡಿ | 9 |
| | | ರಾಮನಗರ | 16 |
| | | **ಒಟ್ಟು** | **73** |

| ಕ್ರ. ಸಂ. | ಜಿಲ್ಲೆಯ ಹೆಸರು | ತಾಲ್ಲೂಕು | ಪ್ರತಿ ಜಿಲ್ಲೆ/ತಾಲ್ಲೂಕಿಗೆ ಹಂಚಿಕೆಯಾದ ದ್ವಿತೀಯ ದರ್ಜೆ ಲೆಕ್ಕ ಸಹಾಯಕರ ಹುದ್ದೆಗಳ ಒಟ್ಟು ಸಂಖ್ಯೆ |
|---|---|---|---|
| 29 | ಉತ್ತರ ಕನ್ನಡ | ಕಾರವಾರ | 7 |
| | | ಅಂಕೋಲ | 7 |
| | | ಕುಮಟಾ | 13 |
| | | ಹೊನ್ನಾವರ | 12 |
| | | ಭಟ್ಕಳ | 11 |
| | | ಯಲ್ಲಾಪುರ | 3 |
| | | ಶಿರಸಿ | 10 |
| | | ಸಿದ್ದಾಪುರ | 5 |
| | | ಮುಂಡಗೋಡ | 8 |
| | | ಹಳಿಯಾಳ | 4 |
| | | ಜೊಯ್ಡ (ಸುಪ) | 2 |
| | | **ಒಟ್ಟು** | **82** |
| 30 | ಯಾದಗಿರಿ | ಸುರಪುರ | 17 |
| | | ಷಹಾಪುರ | 12 |
| | | ಯಾದಗಿರಿ | 15 |
| | | **ಒಟ್ಟು** | **44** |
| | | **ಒಟ್ಟು** | **2500** |

**ಹೆಚ್.ಬಿ. ರಘುನಾಥ್,**
ಸರ್ಕಾರದ ಅಧೀನ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

**ಪಿ.ಆರ್. 1280**

## ಇಂಧನ ಸಚಿವಾಲಯ

**ವಿಷಯ:** ಮೆ॥ ಸನ್ ಪವರ್ ಇಂಡಿಯಾ ರವರ 8.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆ ಅನುಷ್ಠಾನಕ್ಕೆ ಕಾಲಾವಕಾಶ ವಿಸ್ತರಣೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 22 ಎನ್‌ಸಿಇ 2006 ದಿನಾಂಕ: 20.4.2006.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 509 ಎನ್‌ಸಿಇ 2010 ದಿನಾಂಕ: 28.01.2011.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/Sunpower-8.00 MW/2012/1020 ದಿನಾಂಕ: 02/03.04.2012.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ:: ಸನ್ ಪವರ್ ಇಂಡಿಯಾ ಕಂಪನಿಗೆ ಬೆಳಗಾಂ ಜಿಲ್ಲೆಯಲ್ಲಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಳಗೆ ವಿವರಿಸಿರುವಂತೆ ಹಂಚಿಕೆ ಮಾಡಲಾಗಿತ್ತು :

| Sl. No. | Proposed capacity in MW | Near by villages of the proposed area | Geographical area description of the project |
|---|---|---|---|
| 1 | 5 MW | Channenadaddi, Jainapur, Chikodi, Chinchani, **Belgaum district.** | The potential area of 5 MW comprises of two locations and is identified as Area-'A' and Area- 'B'.<br>**Area-'A'-(3 MW):** An East-West oriented non-contiguous ridge is located on the North-West of Chikkodi and is situated at a distance of about 1 km. It is an open scrub and has two peaks and it appears to be non-forest area. The area is covered in the following Geographical co-ordinates:<br>**Latitude**: 16°25'51"- 16°26'44" N<br>**Longitude**: 74°33'9"- 74°34'49" E<br>**Ridge peaks:** 761, 763m Amsl.<br>**Area-'B'-(2 MW):** A plateau with 764m peak is located on the North-West of Channenadaddi village and situated on the South-West of Chikodi a distance about 3.5km and is a non-Forest area. The proposed area is covered in the following Geographical co-ordinates:<br>**Latitude**: 16°23'33"- 16°24'31" N<br>**Longitude**: 74°33'0"- 74°33'50" E<br>**Ridge peaks:** 764m Amsl. |
| **Total** | | **5 MW** | |

ಮೇಲಿನ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಬೆಳಗಾವಿ ಜಿಲ್ಲೆಯಲ್ಲಿ ಹಂಚಿಕೆಯಾಗಿದ್ದ 5 ಮೆ.ವ್ಯಾ ಸಾಮರ್ಥ್ಯದಲ್ಲಿ Area 'A' ಯಲ್ಲಿನ ಚಿಕ್ಕೋಡಿ ಗ್ರಾಮದಲ್ಲಿನ 3.00 ಮೆ.ವ್ಯಾ. ಸಾಮರ್ಥ್ಯವನ್ನು 8.00 ಮೆ.ವ್ಯಾ. ಸಾಮರ್ಥ್ಯಕ್ಕೆ ಈ ಕೆಳಗೆ ವಿವರಿಸಿರುವಂತೆ ಮೇಲಿನ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಹೆಚ್ಚಿಸಲಾಗಿತ್ತು ಹಾಗೂ ಸದರಿ ಯೋಜನೆಯನ್ನು ದಿನಾಂಕ 31.3.2012 ರೊಳಗೆ ಅನುಷ್ಠಾನಗೊಳಿಸತಕ್ಕದ್ದೆಂದು ಆದೇಶಿಸಲಾಗಿತ್ತು.

| Geographical Area details | Sanctioned capacity in MW | Capacity proposed for Enhancement | No. of WTGs & rating in kw | Total capacity including proposed enhancement |
|---|---|---|---|---|
| **Area-'A'-(3 MW):** An East-West oriented non-contiguous ridge is located on the North-West of Chikkodi and is situated at a distance of about 1 km. It is an open scrub and has two peaks and it appears to be non-forest area. The area is covered in the following Geographical co-ordinates:<br>Latitude: 16°25'51"- 16°26'44" N<br>Longitude: 74°33'09"- 74°34'49" E<br>Ridge peaks: 761, 763m Amsl.<br>Toposheet No: 47 L/11. | 3 MW | 5 MW | 5x1600 kw | 8 MW<br>(3 MW to 8 MW) |

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ:: ಸನ್ ಪವರ್ ಇಂಡಿಯಾ ರವರ ಮೇಲಿನ 8.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯು ಪ್ರಗತಿಯ ಹಂತದಲ್ಲಿರುವುದರಿಂದ ಕಾಲಾವಕಾಶ ವಿಸ್ತರಣಾ ಶುಲ್ಕ ₹ 8.00 ಲಕ್ಷಗಳನ್ನು ಪಾವತಿಸುವ ಷರತ್ತಿಗೊಳಪಟ್ಟು ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶವನ್ನು ದಿನಾಂಕ 31.3.2013 ರವರೆಗೆ ವಿಸ್ತರಿಸುವಂತೆ ಅಭಿವೃದ್ಧಿದಾರರ ಕೋರಿಕೆಯ ಹಿನ್ನೆಲೆಯಲ್ಲಿ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 126 ಎನ್‌ಸಿಇ 2012, ಬೆಂಗಳೂರು, ದಿನಾಂಕ: 25.04.2012.**

ಮೆ॥ ಸನ್ ಪವರ್ ಇಂಡಿಯಾ ಇವರಿಗೆ ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲ್ಲೂಕಿನ, ಚಿಕ್ಕೋಡಿ ಗ್ರಾಮದಲ್ಲಿ ಮಂಜೂರಾಗಿರುವ 8.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು **ದಿನಾಂಕ 31.3.2013 ರವರೆಗೆ** ವಿಸ್ತರಿಸಲು ಹಾಗೂ ಕಾಲಾವಕಾಶ ವಿಸ್ತರಣಾ ಶುಲ್ಕ ₹ 8.00 ಲಕ್ಷಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಪಾವತಿಸತಕ್ಕದ್ದೆಂಬ ಷರತ್ತಿಗೊಳಪಟ್ಟು ಆದೇಶಿಸಿದೆ.

ಈ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ,

**ಪಿ.ಆರ್. 1297**

## ಕಾರ್ಮಿಕ ಸಚಿವಾಲಯ

**ವಿಷಯ:** ಜರ್ಮನ್ ಇಂಟರ್ ನ್ಯಾಷನಲ್ ಸರ್ವೀಸಸ್ (ಜಿಐಜೆಡ್–ಐಎಸ್)ರವರು ಸಾರ್ವಜನಿಕ ಖಾಸಗಿ ಸಹಭಾಗಿತ್ವದ ಯೋಜನೆಯಡಿಯಲ್ಲಿನ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿರುವ ಕಿರಿಯ ತರಬೇತಿ ಅಧಿಕಾರಿಗಳಿಗೆ ಜರ್ಮನಿಯಲ್ಲಿ ತರಬೇತಿ ನೀಡಲು ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಕಾಇ 89 ಇಟಿಐ 2011 ದಿನಾಂಕ: 01/10/2011.
2) ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರ ಸಂ. ಉತಇ/ತರಬೇತಿ/ ಪಿಪಿಪಿ–ಜಿಐಜೆಡ್–ಐಎಸ್–ಟಿಆರ್‌ಜಿ/ವಿವ–09/2011–12 ದಿನಾಂಕ: 29/03/2012 ಮತ್ತು 19/04/2012.
3) ದಿನಾಂಕ: 10/04/2012ರಂದು ಕಾರ್ಯದರ್ಶಿ, ಕಾರ್ಮಿಕ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸ್ಕ್ರೀನಿಂಗ್ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಜರ್ಮನ್ ಇಂಟರ್‌ನ್ಯಾಷನಲ್ ಸರ್ವೀಸಸ್ (GIZ-IS) ರವರ ತಾಂತ್ರಿಕ ಸಹಾಯದಿಂದ ಸರ್ಕಾರಿ ಮತ್ತು ಖಾಸಗಿ ಸಹಭಾಗಿತ್ವದೊಂದಿಗೆ ರಾಜ್ಯದಲ್ಲಿನ 76 ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಉನ್ನತೀಕರಿಸುವ ಯೋಜನೆಯನ್ನು 2011–12ನೇ ಸಾಲಿನಿಂದ ಪ್ರಾರಂಭಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಮೇಲೆ (2)ರಲ್ಲಿ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರದಲ್ಲಿ ಮೇಲಿನ ಯೋಜನೆ ಅಡಿಯಲ್ಲಿ ಜಿಐಜೆಡ್–ಐಎಸ್ ಸಂಸ್ಥೆಯು ಸಾರ್ವಜನಿಕ ಖಾಸಗಿ ಸಹಭಾಗಿತ್ವದ ಯೋಜನೆಯಡಿಯಲ್ಲಿ ಉನ್ನತೀಕರಿಸಲಾಗಿರುವ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿನ 8 ಕಿರಿಯ ತರಬೇತಿ ಅಧಿಕಾರಿಗಳನ್ನು SLV, Mannhein Germany ಇಲ್ಲಿ ದಿನಾಂಕ: 23/04/2012ರಿಂದ 04/05/2012ರವರೆಗೆ ನಡೆಯುವ ತರಬೇತಿಗೆ ನಿಯೋಜಿಸಲು ಕೋರಿದ್ದು, ಸದರಿ ತರಬೇತಿಗೆ ತಗಲುವ ಎಲ್ಲಾ ವೆಚ್ಚವನ್ನು ಜಿಐಜೆಡ್–ಐಎಸ್ ರವರಿಗೆ ನೀಡಲಾಗುವ ಯೋಜನಾ ಫೀಸ್‌ನಲ್ಲಿ ಭರಿಸುವುದಾಗಿ ತಿಳಿಸಿರುತ್ತಾರೆ. ಅಲ್ಲದೇ, ಜಿಐಜೆಡ್–ಐಎಸ್ ರವರನ್ನು ತಾಂತ್ರಿಕ ಸಲಹೆಗಾರರನ್ನಾಗಿ ನೇಮಕ ಮಾಡಿಕೊಂಡಿದ್ದು, ಇವರಿಗೆ ನಾಲ್ಕು ವರ್ಷಗಳಿಗೆ ನೀಡಲಾಗುವ ಒಟ್ಟು ಪ್ರಾಜೆಕ್ಟ್ ಮೊತ್ತ ₹ 3000 ಲಕ್ಷಗಳ ಪೈಕಿ ಶೇ. 50 ರಷ್ಟು ರಾಜ್ಯ ಸರ್ಕಾರವು ಭರಿಸುತ್ತಿದ್ದು, ಉಳಿದ ಶೇ. 50ರಷ್ಟು ಮೊತ್ತವನ್ನು 76 ಸಾರ್ವಜನಿಕ ಖಾಸಗಿ ಸಹಭಾಗಿತ್ವದ ಸಂಸ್ಥೆಗಳ ಐಎಂಸಿಗಳಿಂದ ಭರಿಸಲು ಕೇಂದ್ರ ಸರ್ಕಾರದ ಒಪ್ಪಿಗೆಯನ್ನು ಕೋರಿದ್ದು, ನಿರೀಕ್ಷಿಸಲಾಗಿದೆ ಎಂದು ತಿಳಿಸಿರುವರು. ಮುಂದುವರೆದು, 76 ಸಾರ್ವಜನಿಕ ಖಾಸಗಿ ಸಹಭಾಗಿತ್ವದ ಸಂಸ್ಥೆಗಳಲ್ಲಿ 8 ಸಂಸ್ಥೆಗಳಲ್ಲಿ ಮಾತ್ರ ವೆಲ್ಡರ್ ವೃತ್ತಿಯನ್ನು ಅನುಷ್ಠಾನಗೊಳಿಸಿದ್ದು, ಈ 8 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ 8 ಕಿರಿಯ ತರಬೇತಿ ಅಧಿಕಾರಿಗಳು ತರಬೇತಿಯನ್ನು ಪೂರೈಸಿದ ನಂತರ ಕನಿಷ್ಟ 3 ವರ್ಷಗಳವರೆಗೆ ಸದರಿ ಸಂಸ್ಥೆಯಲ್ಲಿಯೇ ಕಾರ್ಯನಿರ್ವಹಿಸುವಂತೆ ಷರತ್ತಿಗೆ ಒಳಪಡಿಸಿ ತರಬೇತಿಗೆ ನಿಯೋಜಿಸಲು ಕೋರಿರುತ್ತಾರೆ. ಮುಂದುವರೆದು ದಿನಾಂಕ: 19/04/2012ರಲ್ಲಿನ ಪತ್ರದಲ್ಲಿ ಶ್ರೀ ಶೋಯಬ್ ಅಹಮದ್, ಕಿರಿಯ ತರಬೇತಿ ಅಧಿಕಾರಿ, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ವಾಡಿ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆದು ದಿನಾಂಕ: 19/05/2010ರಿಂದ ಎರಡು ವಾರ್ಷಿಕ ವೇತನ ಬಡ್ತಿಯನ್ನು ತಡೆಹಿಡಿಯುವಂತೆ ದಂಡನೆ ವಿಧಿಸಿರುವ ಹಿನ್ನೆಲೆಯಲ್ಲಿ ಸದರಿಯವರನ್ನು ಹೊರತುಪಡಿಸಿ ಉಳಿದ 7 ಮಂದಿ ಕಿರಿಯ ತರಬೇತಿ ಅಧಿಕಾರಿಗಳನ್ನು ತರಬೇತಿಗೆ ನಿಯೋಜಿಸಲು ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಸ್ಕ್ರೀನಿಂಗ್ ಸಮಿತಿ ಸಭೆಯಲ್ಲಿ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, 8 ಮಂದಿ ಕಿರಿಯ ತರಬೇತಿ ಅಧಿಕಾರಿಗಳನ್ನು ದಿನಾಂಕ: 23/04/2012ರಿಂದ ದಿನಾಂಕ: 04/05/2012ರವರೆಗೆ SLV, Mannhein Germany ಇಲ್ಲಿ ಜಿಐಜೆಡ್–ಐಎಸ್ ಸಂಸ್ಥೆಯು ನಡೆಸಲಿರುವ ತರಬೇತಿಗೆ ನಿಯೋಜಿಸಲು ಸ್ಕ್ರೀನಿಂಗ್ ಸಮಿತಿಯು ಅನುಮೋದನೆ ನೀಡಿರುತ್ತದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಕೆಳಕಂಡ ಆದೇಶವನ್ನು ನೀಡಲಾಗಿದೆ.

**ಸರ್ಕಾರಿ ಆದೇಶ ಸಂ: ಕಾಇ 89 ಇಟಿಐ 2011, ಬೆಂಗಳೂರು ದಿನಾಂಕ: 20/04/2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಇದರೊಂದಿಗೆ ಲಗತ್ತಿಸಿರುವ ಅನುಬಂಧ–1ರಲ್ಲಿನ 7 ಮಂದಿ ಕಿರಿಯ ತರಬೇತಿ ಅಧಿಕಾರಿಗಳನ್ನು ದಿನಾಂಕ: 23/04/2012ರಿಂದ ದಿನಾಂಕ: 04/05/2012ರವರೆಗೆ SLV, Mannhein Germany ಇಲ್ಲಿ ಜಿಐಜೆಡ್-ಐಎಸ್ ಸಂಸ್ಥೆಯು ನಡೆಸಲಿರುವ ತರಬೇತಿಗೆ ನಿಯೋಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ. ಈ 7 ಮಂದಿ ತರಬೇತಿಯನ್ನು ಪೂರೈಸಿದ ನಂತರ ಕನಿಷ್ಠ 3 ವರ್ಷಗಳವರೆಗೆ ಪಿ.ಪಿ.ಪಿ ಸಂಸ್ಥೆಗಳಲ್ಲಿ ಕರ್ತವ್ಯ ನಿರ್ವಹಿಸತಕ್ಕದ್ದು ಎನ್ನುವ ಷರತ್ತನ್ನು ವಿಧಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜೆ.ಎಸ್.ವಿಶ್ವನಾಥಪ್ಪ,**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ
(ಉದ್ಯೋಗ ಮತ್ತು ತರಬೇತಿ)

**Annexure-1**

**List of Shortlisted JTOs from the PPP ITIs for Training in Germany**

| Sl.No. | Name of the ITI | Name of Division | Name of the JTOs | Remarks |
|---|---|---|---|---|
| 1 | Govt. ITI Ammasandra | Bangalore | H M Durgaiah | Welding Trade |
| 2 | Govt. ITI Tumkur | | Vedamurthy B R | Welding Trade |
| 3 | Govt. ITI Arasikere | Mysore | Dondappa Navi | Welding Trade |
| 4 | Govt. ITI Chickmagalur | | Manjunath B S | Welding Trade |
| 5 | Govt. ITI Kadur | | Lokesh H M | Welding Trade |
| 6 | Govt. ITI Guledgud | Belgaum | Mujawar S R | Fitter Trade Welding as one subject being taught by these JTO's |
| 7 | Govt. ITI Dharwad | | Panchkshrayya S Kashimath | |

**ಜೆ.ಎಸ್.ವಿಶ್ವನಾಥಪ್ಪ,**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ
(ಉದ್ಯೋಗ ಮತ್ತು ತರಬೇತಿ)

**ಪಿ.ಆರ್. 1240**

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ಎಂ.ರಾಧಾಕೃಷ್ಣ, ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ತುಮಕೂರು ಇವರನ್ನು ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ –ಆದೇಶ.

**ಓದಲಾಗಿದೆ:**
1. ದಿ:15–04–2012 ರ ಕನ್ನಡ ಪ್ರಭ ದಿನಪತ್ರಿಕೆಯಲ್ಲಿ ಪ್ರಕಟವಾದ ಮಾಹಿತಿ "ಸರ್ಕಾರಿ ಅಧಿಕಾರಿ ವಿರುದ್ಧ ಅತ್ಯಾಚಾರ ದೂರು"
2. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ರವರ ಪತ್ರ ಸಂಖ್ಯೆ:ಮಮಇ/ನಿಸಿಗೆ/3/2012–13 ದಿ:17–04–2012

**ಪ್ರಸ್ತಾವನೆ:**

ಮೇಲೆ ಉಲ್ಲೇಖ (1) ರಲ್ಲಿ ಓದಲಾದ ದಿ:15–04–2012 ರ ಕನ್ನಡ ಪ್ರಭ ದಿನಪತ್ರಿಕೆಯಲ್ಲಿ ಶ್ರೀ ಎಂ.ರಾಧಾಕೃಷ್ಣ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ತುಮಕೂರು ಇವರು ಖಾಸಗಿ ಸಂಸ್ಥೆಯ ಮುಖ್ಯಸ್ಥೆಯ ಮೇಲೆ ಅತ್ಯಾಚಾರ ಎಸಗಿದರ ಸಂಬಂಧ ಯಲಹಂಕ ಪೋಲೀಸ್ ಠಾಣೆಯಲ್ಲಿ ದೂರು ದಾಖಲಾಗಿದೆಯೆಂದು ಪ್ರಕಟಣೆ ಇರುತ್ತದೆ. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ಉಲ್ಲೇಖ (2) ರ ತಮ್ಮ ವರದಿಯಲ್ಲಿ ಶ್ರೀ ಎಂ.ರಾಧಾಕೃಷ್ಣ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ತುಮಕೂರು, ಇವರು ಶ್ರೀಮತಿ ಗಂಗಾ ಎಂಬುವರ ಮೇಲೆ ಅತ್ಯಾಚಾರ ಮಾಡಿರುವುದಾಗಿ ಈ ಸಂಬಂಧ ಬೆಂಗಳೂರಿನ ಯಲಹಂಕ ಪೋಲೀಸ್ ಠಾಣೆಯಲ್ಲಿ ಮೊ.ಸಂ: 82/2012 ಕಲಂ 376, 376(ಬಿ) 506 ಐಪಿಸಿ ಮತ್ತು 3(2)(11)(12) ಎಸ್‌ಸಿ/ಎಸ್.ಟಿ.ಆಕ್ಟ್ 1989 ರಡಿ ಪ್ರಥಮ ವರ್ತಮಾನ ವರದಿ(ಎಫ್.ಐ,.ಆರ್) ಸಲ್ಲಿಸಿರುವ ಬಗ್ಗೆ ಮಾಹಿತಿ ಒದಗಿಸುತ್ತಾ, ಪ್ರಸ್ತುತ ಅಧಿಕಾರಿಯು ದಿ:14–04–2012 ರಿಂದ ಪೋಲೀಸ್ ದಸ್ತಗಿರಿ ಮಾಡಿದ್ದು, ಮಾನ್ಯ ಸಿ.ಎಂ.ಎಂ. ನ್ಯಾಯಾಲಯಕ್ಕೆ ಹಾಜರುಪಡಿಸಿದ್ದು, ನ್ಯಾಯಾಂಗ ಬಂಧನದಲ್ಲಿರುವುದರಿಂದ ಹಾಗೂ ಬಿಡುಗಡೆ ಕೋರಿ ಸಂಬಂಧಪಟ್ಟ ನ್ಯಾಯಾಲಯದಲ್ಲಿ ಜಾಮೀನು ಅರ್ಜಿ ಪರಿಶೀಲನೆಯಲ್ಲಿರುವುದರಿಂದ ಅರ್ಜಿಯು ವಿಚಾರಣಾ ಹಂತದಲ್ಲಿದ್ದು, ಈ ಬಗ್ಗೆ ಸರ್ಕಾರ ನಿಯಮಾನುಸಾರ ಮುಂದಿನ ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ವರದಿಸಿರುತ್ತಾರೆ.

ಪ್ರಕರಣವನ್ನು ಕರ್ನಾಟಕ ನಾಗರಿಕ ಸೇವಾ (ಸಿಸಿಎ) ನಿಯಮಾವಳಿ 1957 ರ ನಿಯಮ 10(2)(ಎ) ರನ್ವಯ ಪರಿಶೀಲಿಸಲಾಗಿದೆ. ಯಾವುದೇ ಒಬ್ಬ ಸರ್ಕಾರಿ ಅಧಿಕಾರಿ/ನೌಕರರನ್ನು ಕ್ರಿಮಿನಲ್ ಮೊಕದ್ದಮೆಯಡಿ 48 ಗಂಟೆಗಳ ಕಾಲ ದಸ್ತಗಿರಿ ಮಾಡಿ ವಶದಲ್ಲಿಟ್ಟುಕೊಂಡಲ್ಲಿ ಅಂತಹ ಅಧಿಕಾರಿ/ನೌಕರರನ್ನು ದಸ್ತಗಿರಿ ಮಾಡಿದ ದಿನಾಂಕದಿಂದಲೇ ಜಾರಿಗೆ ಬರುವಂತೆ ಇಲಾಖಾ ವಿಚಾರಣೆ ಬಾಕಿಯಿರಿಸಿ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಲು ಅವಕಾಶ ಕಲ್ಪಿಸಲಾಗಿದೆ. ಅದರಂತೆ ಈ ಪ್ರಕರಣದಲ್ಲಿ ಶ್ರೀ ಎಂ.ರಾಧಾಕೃಷ್ಣ, ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ತುಮಕೂರು ಇವರನ್ನು ದಿನಾಂಕ:14–04–2012 ರಿಂದಲೇ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಇಲಾಖಾ ವಿಚಾರಣೆ ಬಾಕಿಯಿರಿಸಿ. ಕ.ನಾ.ಸೇ(ಸಿಸಿಎ) ನಿಯಮಾವಳಿ 1957 ರ ನಿಯಮ 10(2)(ಎ) ರನ್ವಯ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಮಮಇ 175 ಎಸ್‌ಜೆಡಿ 2012, ಬೆಂಗಳೂರು, ದಿನಾಂಕ:23–04–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಎಂ.ರಾಧಾಕೃಷ್ಣ, ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ತುಮಕೂರು, ಇವರನ್ನು ಕ.ನಾ.ಸೇ(ಸಿಸಿಎ) ನಿಯಮಾವಳಿ 1957 ರ ನಿಯಮ 10(2)(ಎ) ರನ್ವಯ ದಿನಾಂಕ:14–04–2012 ರಿಂದಲೇ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಇಲಾಖಾ ವಿಚಾರಣೆ ಬಾಕಿಯಿರಿಸಿ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳು 1957 ರ ನಿಯಮ 98 (1) ರನ್ವಯ ಜೀವನಾಂಶ ಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ. ಅಲ್ಲದೆ ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಸಕ್ಷಮ ಪ್ರಾಧಿಕಾರದ ಲಿಖಿತ ಅನುಮೋದನೆ ಇಲ್ಲದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಮುಂದುವರೆದು ಇವರು ಅಮಾನತ್ತಿನ ಅವಧಿಯಲ್ಲಿ ಜೀವನಾಂಶ ಭತ್ಯೆ ಪಡೆಯಲು ಇವರ ಲೀನ್ ಅನ್ನು ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರಿಗೆ ವರ್ಗಾಯಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಕಮಲಮ್ಮ**
ಸರ್ಕಾರದ ಅಧೀನಕಾರ್ಯದರ್ಶಿ–2,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಪಿ.ಆರ್. 1257**

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀಮತಿ ಉಷಾ ಆರ್ ಪಟ್ವಾರಿ, ಹಿಂದಿನ ಜಂಟಿ ನಿರ್ದೇಶಕರು (ಐಸಿಡಿಎಸ್), ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಹಾಲಿ ಪ್ರಧಾನ ವ್ಯವಸ್ಥಾಪಕರು–2, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ, ಬೆಂಗಳೂರು ಇವರನ್ನು ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ–ಆದೇಶ.

**ಓದಲಾಗಿದೆ:**

1. ದಿನಾಂಕ:10–03–2012 ರಂದು ಪ್ರಜಾವಾಣಿ ದಿನಪತ್ರಿಕೆಯಲ್ಲಿ ಪ್ರಕಟವಾದ ಮಾಹಿತಿ "ಐಎಎಸ್ ಅಧಿಕಾರಿ ಮನೆ ಸೇರಿ 20 ಕಡೆ ಲೋಕಾಯುಕ್ತ ದಾಳಿ"
2. ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು, ರವರ ಕಛೇರಿಯ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ ಸಿಟಿ/ಕ್ರೈಂ.28/2012 ದಿ:05–04–2012
3. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಕಛೇರಿಯ ಅರೆ ಸರ್ಕಾರಿ ಪತ್ರ ಸಂಖ್ಯೆ:ಮಮಅಇ/ಆಶಾ/11–12 ದಿನಾಂಕ:17–03–2012

**ಪ್ರಸ್ತಾವನೆ:**

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸಮಗ್ರ ಶಿಶು ಅಭಿವೃದ್ಧಿ ಯೋಜನೆಯಲ್ಲಿ (ಐಸಿಡಿಎಸ್) ಭಾರಿ ಪ್ರಮಾಣದ ಅವ್ಯವಹಾರ ನಡೆದಿರುವುದನ್ನು ಲೋಕಾಯುಕ್ತ ಪೋಲೀಸರು ಪತ್ತೆ ಹಚ್ಚಿದ್ದು, ಹಿಂದಿನ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯವರ ನಿವಾಸವನ್ನೊಳಗೊಂಡಂತೆ ರಾಜ್ಯದ ವಿವಿಧೆಡೆ 20 ಕಡೆಗಳಲ್ಲಿ ದಿ:09–03–2012 ರಂದು ಏಕಕಾಲಕ್ಕೆ ದಾಳಿ ನಡೆಸಿ ಮಹತ್ವದ ದಾಖಲೆಗಳನ್ನು ವಶಪಡಿಸಿಕೊಂಡಿದ್ದು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಜಂಟಿ ನಿರ್ದೇಶಕರಾದ ಶ್ರೀಮತಿ ಉಷಾ ಆರ್ ಪಟವಾರಿ, ಸಹಾಯಕ ನಿರ್ದೇಶಕರಾದ ಶ್ರೀ ಎಂ.ಮುನಿರಾಜು, ಇವರುಗಳ ಮನೆ ಮತ್ತು ಕಛೇರಿಗಳಿಗೆ ದಾಳಿ ನಡೆಸಿ ಐ.ಸಿ.ಡಿ.ಎಸ್. ಯೋಜನೆಯ ಪೌಷ್ಠಿಕ ಆಹಾರ ಮತ್ತು ಔಷಧಿ ಪೂರೈಕೆ ಗುತ್ತಿಗೆ ಪಡೆದಿರುವ ತಮಿಳುನಾಡು ಮೂಲದ ಕ್ರಿಸ್ಟಿ ಫ್ರೈಡ್‌ಗ್ರಾಮ್ಸ್ ಕಛೇರಿ, ಗೋದಾಮುಗಳ ಮೇಲೆ ಹಾಗೂ ಮಹಿಳಾ ಮತ್ತು ಮಕ್ಕಳ ಕಲ್ಯಾಣ ನಿರ್ದೇಶನಾಲಯ, ಅಂಗನವಾಡಿ ಕೇಂದ್ರಗಳು ಮತ್ತು ಮಹಿಳಾ ಸಂಘಗಳ ಉತ್ಪದನಾ ಕೇಂದ್ರಗಳ ಮೇಲೆ ದಾಳಿ ನಡೆಸಲಾಗಿರುವುದು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿ:10–03–2012 ರ ಪ್ರಜಾವಾಣಿ ದಿನಪತ್ರಿಕೆಯಲ್ಲಿ ಪ್ರಕಟವಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ:05–04–2012 ರ ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು, ರವರ ಪತ್ರದಲ್ಲಿ ಸಾವಿರಾರು ಮಕ್ಕಳು ಹಾಲುಣಿಸುವ ತಾಯಂದಿರು, ಗರ್ಭಿಣಿಯರು ಹಾಗೂ ಕಿಶೋರಿ ಹೆಣ್ಣು ಮಕ್ಕಳಿಗೆ ಅವಶ್ಯಕವಾಗಿರುವ ಹೆಚ್ಚುವರಿ ಪೌಷ್ಠಿಕಾಂಶವನ್ನು ಒದಗಿಸಲು ವಾರ್ಷಿಕ ಸುಮಾರು 500 ಕೋಟಿ ವೆಚ್ಚದ ಸರ್ಕಾರದ ಸಮಗ್ರ ಶಿಶು ಅಭಿವೃದ್ಧಿ ಯೋಜನೆಯಡಿ ನಡೆದಿರುವ ಅವ್ಯಹಾರದಿಂದಾಗಿ ಸುಮಾರು 45 ಲಕ್ಷ ಫಲಾನುಭವಿಗಳಿಗೆ ತೊಂದರೆಯಾಗಿದ್ದು, ಮಕ್ಕಳು ಮತ್ತು ಮಹಿಳೆಯರಲ್ಲಿ ಪೌಷ್ಠಿಕಾಂಶದ ಕೊರತೆ ಬಗ್ಗೆ ಹಲವಾರು ದೂರು/ಮಾಹಿತಿ ಬಂದ ಹಿನ್ನೆಲೆಯಲ್ಲಿ ಈ ಬಗ್ಗೆ ಪ್ರಾಥಮಿಕ ತನಿಖೆ ನಡೆಸಿ ಪಿರ್ಯಾದಿ ಶ್ರೀ ವಿ.ಅನಿಲ್ ಕುಮಾರ್, ಪೋಲೀಸ್ ನಿರೀಕ್ಷಕರು, ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ನೀಡಿದ ವಿವರವಾದ ವರದಿಯ ಆಧಾರದ ಮೇರೆಗೆ, ಆರೋಪಿ–1 ಡಾ:ಶಮ್ಲಾ ಇಕ್ಬಾಲ್, ಹಿಂದಿನ ನಿರ್ದೇಶಕರು, ಆರೋಪಿ–2 ಶ್ರೀಮತಿ ಉಷಾ ಆರ್ ಪಟವಾರಿ, ಜಂಟಿ ನಿರ್ದೇಶಕರು, ಆರೋಪಿ–3 ಮುನಿರಾಜು, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಹಾಗೂ ಇತರರ ವಿರುದ್ಧ ಸರ್ಕಾರಿ ಯೋಜನೆಯ ಅವ್ಯವಹಾರದ ಸಂಬಂಧ ಬೆಂಗಳೂರು ನಗರ ಲೋಕಾಯುಕ್ತ ಪೋಲೀಸ್ ಠಾಣಾ ಮೊ.ಸಂ.20/2012 ರಲ್ಲಿ ದಿ:08–03–2012 ರಂದು ಪ್ರಕರಣವನ್ನು ದಾಖಲಿಸಿ ದಿ:09–03–2012 ರಂದು ಶೋಧನೆಯನ್ನು ಕೈಗೊಳ್ಳಲಾಗಿದೆಯೆಂದು ವರದಿಯಾಗಿದೆ.

ಮುಂದುವರೆದು ಶ್ರೀಮತಿ ಉಷಾ ಆರ್ ಪಟವಾರಿ, ಜಂಟಿ ನಿರ್ದೇಶಕರು, ಮತ್ತು ಶ್ರೀ ಎಂ.ಮುನಿರಾಜು, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ನಿರ್ದೇಶನಾಲಯ, ಬಹುಮಹಡಿಗಳ ಕಟ್ಟಡ, ಬೆಂಗಳೂರು ರವರುಗಳು ತಮ್ಮ ಎಲ್ಲಾ ಬಲ್ಲ ಮೂಲಗಳ ಆದಾಯಕ್ಕಿಂತ ಹೆಚ್ಚಿನ ಅಕ್ರಮ ಆಸ್ತಿ ಗಳಿಸಿರುತ್ತಾರೆಂಬ ಮಾಹಿತಿಯ ಮೇರೆಗೆ ಸದರಿಯವರ ಸ್ಥಿರ ಮತ್ತು ಚರಾಸ್ತಿಗಳ ವಿವರಗಳನ್ನು ಕಲೆ ಹಾಕಿ ದಿ:03–04–2012 ರಂದು ಬೆಂಗಳೂರು ನಗರ ಲೋಕಾಯುಕ್ತ ಪೋಲೀಸ್ ಠಾಣಾ ಮೊ.ಸಂ.28/2012 ರಡಿ ಭ್ರಷ್ಟಾಚಾರ ಪ್ರತಿಬಂಧಕ ಕಾಯ್ದೆ 1988 ರ ಕಲಂ 13(1)(ಇ) ಸಹವಾಚನ 13(2) ರನ್ವಯ ಪ್ರಕರಣವನ್ನು ದಾಖಲಿಸಿದ್ದು, ಪ್ರಸ್ತುತ ತನಿಖೆಯಲ್ಲಿರುತ್ತದೆಯೆಂದು ವರದಿಯಾಗಿದೆ.

ದಿನಾಂಕ:09–03–2012 ರ ಆರೋಪಿತರ ಮನೆ ಶೋಧನೆ ಸಮಯದಲ್ಲಿ ಚಿನ್ನ, ವಜ್ರ ಒಳಗೊಂಡ ಆಭರಣಗಳ ಆರೋಪಿತೆ ಶ್ರೀಮತಿ ಉಷಾ ಪಟ್ವಾರಿ ಹಾಗೂ ಅವರ ಗಂಡ, ಮಗ ಮತ್ತು ಇತರರ ಹೆಸರಿನಲ್ಲಿ ಬೆಲೆ ಬಾಳುವ ಸ್ಥಿರಾಸ್ತಿ, ಚರಾಸ್ಥಿಗಳು, ಬ್ಯಾಂಕ್ ಖಾತೆ, ಠೇವಣಿ ಹಾಗೂ ಲಾಕರ್‌ಗಳನ್ನು ಹೊಂದಿರುವುದು ಕಂಡು ಬಂದಿದ್ದು, ಸಂಬಂಧಪಟ್ಟ ದಾಖಲಾತಿಗಳನ್ನು ಅಮಾನತ್ತುಪಡಿಸಿಕೊಳ್ಳಲಾಗಿದೆ ಎಂದು ವರದಿಯಾಗಿದೆ.

ಶ್ರೀಮತಿ ಉಷಾ ಆರ್ ಪಟ್ವಾರಿ, ಜಂಟಿ ನಿರ್ದೇಶಕರು, ತಮ್ಮ ಎಲ್ಲಾ ಬಲ್ಲ ಮೂಲಗಳ ಆದಾಯಕ್ಕಿಂತ ರೂ.2,15,06,007/– ಗಳಷ್ಟು ಪ್ರಮಾಣದಲ್ಲಿ (ಶೇ.241.64%)ಅಕ್ರಮ ಆಸ್ತಿಯನ್ನು ಸಂಪಾದಿಸಿ ಇತರೆ ವಹಿವಾಟುಗಳು ನಡೆಸಿ ಭ್ರಷ್ಟಾಚಾರ ಪ್ರತಿಬಂಧಕ ಕಾಯ್ದೆ, 1988 ರ ಕಲಂ 13(1)(ಇ) ಜೊತೆಗೆ 13(2) ರ ಅಡಿ ಶಿಕ್ಷಾರ್ಹವಾದ ಅಪರಾಧವೆಸಗಿರುವುದು ಈವರೆಗೆ ಕಂಡು ಬಂದಿರುತ್ತದೆಂದು, ಸದರಿ ಅಧಿಕಾರಿಯು ತಮ್ಮ ಬಲ್ಲ ಮೂಲಗಳಿಗಿಂತ ಹೆಚ್ಚಿನ ಆಸ್ತಿಯನ್ನು ಹೊಂದಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಸದರಿ ಅಧಿಕಾರಿಯನ್ನು ಕೂಡಲೇ ಅಮಾನತ್ತಿನಲ್ಲಿಡಲು ಹಾಗೂ ಅವರ ಲೀನ್ (ಸ್ಥಾನ) ಬೇರೆಡೆಗೆ ವರ್ಗಾಯಿಸುವಂತೆ ಅಪರ ಪೋಲೀಸ್ ಮಹಾನಿರ್ದೇಶಕರು ಶಿಫಾರಸ್ಸು ಮಾಡಿರುತ್ತಾರೆ.

ಮಾನ್ಯ ಅಪರ ಪೋಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರ ಶಿಫಾರಸ್ಸನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಮಮಇ 121 ಎಸ್‌ಜೆಡಿ 2012, ಬೆಂಗಳೂರು ದಿನಾಂಕ:23–04–2012**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನಲೆಯಲ್ಲಿ, ಶ್ರೀಮತಿ ಉಷಾ ಆರ್ ಪಟ್ವಾರಿ, ಹಿಂದಿನ ಜಂಟಿ ನಿರ್ದೇಶಕರು (ಐಸಿಡಿಎಸ್), ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಹಾಲಿ ಪ್ರಧಾನ ವ್ಯವಸ್ಥಾಪಕರು–2, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ, ಬೆಂಗಳೂರು ಇವರನ್ನು ಕರ್ನಾಟಕ ನಾಗರಿಕ ಸೇವಾ (ಸಿ.ಸಿ.ಎ) ನಿಯಮಾವಳಿಗಳು 1957 ರ ನಿಯಮ 10(1)(ಎ) ಮೇರೆಗೆ ಈ ಕೂಡಲೇ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಶ್ರೀಮತಿ ಉಷಾ ಆರ್ ಪಟ್ವಾರಿ, ಜಂಟಿ ನಿರ್ದೇಶಕರು ಇವರ ಲೀನ್ (ಸ್ಥಾನ) ನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಪ್ರಧಾನ ಕಛೇರಿಯ ಜಂಟಿ ನಿರ್ದೇಶಕರ ಹುದ್ದೆಗೆ ವರ್ಗಾಯಿಸಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳು 1957 ರ ನಿಯಮ 98(1) ರನ್ವಯ ಜೀವನಾಂಶ ಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ. ಅಲ್ಲದೆ ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಸಕ್ಷಮ ಪ್ರಾಧಿಕಾರದ ಲಿಖಿತ ಅನುಮೋದನೆ ಇಲ್ಲದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಕಮಲಮ್ಮ**
ಸರ್ಕಾರದ ಅಧೀನಕಾರ್ಯದರ್ಶಿ–2,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಪಿ.ಆರ್. 1258**

## ತೋಟಗಾರಿಕೆ ಸಚಿವಾಲಯ

**ವಿಷಯ:** ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ಕೆನರಾ ಬ್ಯಾಂಕಿನಿಂದ ಸಾಲ ಪಡೆಯಲು ಗ್ಯಾರಂಟಿ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ವಾಕೈ 03 ರೇಉನಿ 2011(ಭಾಗ–1), ದಿನಾಂಕ: 31–3–2011.
2. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ಇವರ ಪತ್ರ ಸಂಖ್ಯೆ: ಕರೇಮಾಮ/ಹಣಕಾಸು/2011–12/1672, ದಿನಾಂಕ: 1–2–2012.
3. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ಇವರ ಪತ್ರ ಸಂಖ್ಯೆ: ಕರೇಮಾಮ/ಹಣಕಾಸು/2011–12/1671, ದಿನಾಂಕ: 1–2–2012.

**ಪ್ರಸ್ತಾವನೆ:**

ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ರೇಷ್ಮೆ ಗೂಡಿನ ಬೆಲೆ ಕುಸಿತವನ್ನು ತಡೆದು ರೇಷ್ಮೆ ನೂಲಿನ ಬೆಲೆಯಲ್ಲಿ ಸ್ಥಿರತೆಯನ್ನು ಉಂಟುಮಾಡಲು ಸಮರ್ಪಕವಾಗಿ ಕಾರ್ಯನಿರ್ವಹಿಸುವುದಕ್ಕಾಗಿ ಅದಕ್ಕೆ ಅಗತ್ಯವಿರುವ ದುಡಿಯುವ ಬಂಡವಾಳಕ್ಕಾಗಿ ಕೆನರಾ ಬ್ಯಾಂಕ್‌ನಿಂದ ರೂ.25.00 ಕೋಟಿಗಳ (ಇಪ್ಪತ್ತೈದು ಕೋಟಿ ರೂಪಾಯಿಗಳು ಮಾತ್ರ) ಸಾಲ ಪಡೆಯುವುದಕ್ಕೆ ಸರ್ಕಾರದ ಗ್ಯಾರಂಟಿಯನ್ನು ಕೆಲವು ಷರತ್ತಿಗಳೊಂದಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ನೀಡಿದೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಬ್ಯಾಂಕಿನಿಂದ ಸಾಲವನ್ನು ಮುಂದುವರೆಸ ಬೇಕಾಗಿರುವುದರಿಂದ ಸರ್ಕಾರದ ಗ್ಯಾರಂಟಿಯ ಅವಧಿಯನ್ನು ದಿನಾಂಕ: 31–3–2013ರವರೆಗೆ ನವೀಕರಿಸಲು ಕೋರಿರುತ್ತಾರೆ. ಹಾಗೂ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಸರ್ಕಾರದ ಖಾತರಿ ಮೇಲೆ ಕೆನರಾ ಬ್ಯಾಂಕಿನಿಂದ ರೂ. 25.00 ಕೋಟಿ ಸಾಲದ ಮಂಜೂರಾತಿಗೆ ಅಗತ್ಯವಾಗಿರುವ ದಸ್ತಾವೇಜುಗಳನ್ನು ನೀಡಬೇಕಾಗಿರುವುದರಿಂದ ಡೀಡ್ ಆಫ್ ಗ್ಯಾರಂಟಿಗೆ ಅನುಮೋದನೆ ನೀಡುವಂತೆಯೂ ಸಹ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂ: ವಾಕೈ 03 ರೇಉನಿ 2011(ಭಾಗ–1) ಬೆಂಗಳೂರು, ದಿ: 25–4–2012.**

ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ಕೆನರಾ ಬ್ಯಾಂಕಿನಿಂದ ರೂ.25.00 ಕೋಟಿಗಳ ಸಾಲ ಪಡೆಯುವ ಗ್ಯಾರಂಟಿ ಅವಧಿಯನ್ನು ದಿನಾಂಕ: 31–3–2011ರ ಆದೇಶದಲ್ಲಿ ವಿಧಿಸಿರುವ ಈ ಕೆಳಕಂಡ ಷರತ್ತಿಗೊಳಪಟ್ಟು ದಿನಾಂಕ: 31–3–2013 ರವರೆಗೆ ವಿಸ್ತರಿಸಲು ಹಾಗೂ ಸರ್ಕಾರದ

ಗ್ಯಾರಂಟಿ ಮೇಲೆ ಕೆನರಾ ಬ್ಯಾಂಕಿನಿಂದ ರೂ. 25.00 ಕೋಟಿ ಸಾಲದ ಮಂಜೂರಾತಿಗೆ ಅಗತ್ಯವಾಗಿರುವ ದಸ್ತಾವೇಜುಗಳನ್ನು ನೀಡಬೇಕಾಗಿರುವುದರಿಂದ ಡೀಡ್ ಆಫ್ ಗ್ಯಾರಂಟಿಗೆ ಅನುಮೋದನೆ ನೀಡಲಾಗಿದೆ.

a. This guarantee is given primarily for the purpose of price stabilization of silk yarn on account of the reduction in the import duty from 30% to 5% by the Union Government. As a result, the funds should exclusively be used for undertaking price stabilization measures and not for any other internal needs of the KSMBL like payment of salaries and other administrative expenditure.

b. A separate account shall be opened by KSMBL where the proceeds of the proposed loan shall be kept and any transaction for purchase and sale of silk yarn should be escrowed only to the new account. Apart from these transactions any other transaction shall not be undertaken by the Board from this account.

c. The Board shall submit a quarterly report of the transactions undertaken from the designated account to the Government and certify that this money has not been used for any other activity.

d. Further, guarantee commission at the rate of 1% per annum shall be payable by KSMB as per Karnataka Ceiling on Government Guarantees Act, 1999.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD/527/Exp.4/2011, ದಿನಾಂಕ: 16-2-2012 ರಲ್ಲಿಯ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ಚಂದ್ರಶೇಖರ್,**

ಪೀಠಾಧಿಕಾರಿ,

ತೋಟಗಾರಿಕೆ ಇಲಾಖೆ (ರೇಷ್ಮೆ)

**ಪಿ.ಆರ್. 1269**

## ಕಂದಾಯ ಸಚಿವಾಲಯ

**ವಿಷಯ:** 2012-13ನೇ ಸಾಲಿನಲ್ಲಿ ಶಿವಮೊಗ್ಗ ಜಿಲ್ಲೆಯಲ್ಲಿ ಬೇಸಿಗೆ ಹಿನ್ನಲೆಯಲ್ಲಿ, ಕುಡಿಯುವ ನೀರು ಪೂರೈಸಲು ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರ ಪತ್ರ ಸಂ: ಜಿಕ/ಕುನೀ/ಹ.ಮಂ/2011-12, ದಿನಾಂಕ: 15-04-2012.

**ಪ್ರಸ್ತಾವನೆ :**

2012-13ನೇ ಸಾಲಿನಲ್ಲಿ ರಾಜ್ಯದಲ್ಲಿ ಬೇಸಿಗೆ ಇರುವುದರಿಂದ, ಶಿವಮೊಗ್ಗ ಜಿಲ್ಲೆಯ, ಗ್ರಾಮೀಣ ಪ್ರದೇಶಗಳಲ್ಲಿ ಉದ್ಭವಿಸಿರುವ ಕುಡಿಯುವ ನೀರಿನ ಸಮಸ್ಯೆ ಕ್ರಮಗಳನ್ನು ಕೈಗೊಳ್ಳಲು, ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವಂತೆ ಉಲ್ಲೇಖಿತ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರು ಬೇಡಿಕೆ ಸಲ್ಲಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ, ಕುಡಿಯುವ ನೀರಿನ ಪೂರೈಕೆಗಾಗಿ ರಾಜ್ಯ ವಿಪತ್ತು, ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 149 ಟಿಎನ್‌ಆರ್ 2012, ಬೆಂಗಳೂರು, ದಿನಾಂಕ: 20-04-2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೇಸಿಗೆಯಲ್ಲಿ, ಜನ, ಜಾನುವಾರುಗಳಿಗೆ ಕುಡಿಯುವ ನೀರಿನ ಸಮಸ್ಯೆಗೆ ಕ್ರಮ ಕೈಗೊಳ್ಳಲು, ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಇವರಿಗೆ ರೂ.200.00 ಲಕ್ಷಗಳನ್ನು (ರೂಪಾಯಿ ಇನ್ನೂರು ಲಕ್ಷಗಳು ಮಾತ್ರ) ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

1) ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನವನ್ನು ಜಿಲ್ಲಾಧಿಕಾರಿಗಳು ಮತ್ತು ಮುಖ್ಯ ಕಾರ್ಯನಿರ್ವಹಕಾಧಿಕಾರಿಗಳು ಸಮಾಲೋಚಿಸಿ ತುರ್ತು ಕುಡಿಯುವ ನೀರಿನ ವ್ಯವಸ್ಥೆಗಾಗಿ ಬಳಸುವುದು.

2) ಕೇಂದ್ರ ಸರ್ಕಾರವು ಹೊರಡಿಸಿರುವ ಮಾರ್ಗಸೂಚಿಗಳ ಪ್ರಕಾರ ವೆಚ್ಚ ಮಾಡುವುದು.

3) ಬರಪೀಡಿತ ಪ್ರದೇಶಗಳಿಗೆ ಜಿಲ್ಲಾಧಿಕಾರಿಗಳು ಹಾಗೂ ಮುಖ್ಯ ಕಾರ್ಯನಿರ್ವಹಕಾಧಿಕಾರಿಗಳು ವ್ಯಾಪಕವಾಗಿ ಪ್ರವಾಸ ಮಾಡುವುದು ಹಾಗೂ ಯಾವುದೇ ಗ್ರಾಮದಲ್ಲಿ ಕುಡಿಯುವ ನೀರು ಹಾಗೂ ಜಾನುವಾರುಗಳಿಗೆ ಸಂಬಂಧಪಟ್ಟ ಸಮಸ್ಯೆಗಳು ಉದ್ಭವವಾಗದಂತೆ ನೋಡಿಕೊಳ್ಳುವುದು.

4) ಕುಡಿಯುವ ನೀರಿನ ಸಮಸ್ಯೆಗಳನ್ನು ಬಗೆಹರಿಸಲು ತಾಲ್ಲೂಕಿಗೊಂದು ಸಹಾಯವಾಣಿಯನ್ನು ಸ್ಥಾಪಿಸಿ, ತಾಂತ್ರಿಕ ಸಿಬ್ಬಂದಿಯನ್ನು ನಿಯೋಜಿಸಿ 24 ಗಂಟೆಯೊಳಗಾಗಿ ಕುಡಿಯುವ ನೀರಿನ ಸಮಸ್ಯೆಗಳನ್ನು ಬಗೆಹರಿಸುವುದು.

5) ಪ್ರತಿ 15 ದಿನಗಳಿಗೊಮ್ಮೆ ಜಿಲ್ಲಾಧಿಕಾರಿಗಳು ಮತ್ತು ಮುಖ್ಯ ಕಾರ್ಯನಿರ್ವಹಕಾಧಿಕಾರಿಗಳು ಜಂಟಿಯಾಗಿ ಬರ ಪರಿಹಾರ ಕಾಮಗಾರಿಗಳ ಬಗ್ಗೆ ಪತ್ರಿಕಾ ಗೋಷ್ಠಿ ನಡೆಸಿ ಮಾಧ್ಯಮಗಳಿಗೆ ಜಿಲ್ಲೆಯಲ್ಲಿ ಕೈಗೊಂಡಿರುವ ಕುಡಿಯುವ ನೀರಿಗೆ ಸಂಬಂಧಿಸಿದಂತೆ ಸಾಧಿಸಿರುವ ಪ್ರಗತಿಯ ಚಿತ್ರಣವನ್ನು ಬಿಂಬಿಸುವುದು. ಪತ್ರಿಕಾಗೋಷ್ಠಿಯಲ್ಲಿ ಸಿದ್ಧಪಡಿಸಿದ ಟಿಪ್ಪಣಿಯನ್ನು ಇ–ಮೇಲ್ ಮುಖಾಂತರ ಸರ್ಕಾರಕ್ಕೆ ರವಾನಿಸುವುದು. ಇ–ಮೇಲ್ ವಿಳಾಸ **secyrelief-rev@karnataka.gov.in.**

6) ಪ್ರತಿ ಹೋಬಳಿಗೆ ಒಬ್ಬ ಜಿಲ್ಲಾ ಮಟ್ಟದ ನೋಡಲ್ ಅಧಿಕಾರಿಯನ್ನು ನೇಮಿಸಿ ಅವರ ಮೂಲಕ ಕುಡಿಯುವ ನೀರಿನ ಕಾಮಗಾರಿಗಳನ್ನು ವ್ಯಾಪಕವಾಗಿ ಪರಿಶೀಲನೆ ಮಾಡುವುದು.

7) ಮುಂದಿನ 2 ತಿಂಗಳುಗಳ ಕಾಲ ಕುಡಿಯುವ ನೀರಿನ ಕೊರತೆಯುಂಟಾಗದಂತೆ ಹಾಗೂ ಯಾವುದೇ ದೂರುಗಳು ಬರದಂತೆ ಕಾರ್ಯ ನಿರ್ವಹಿಸುವುದು.

8) ಪ್ರತಿಯೊಂದು ಕಾಮಗಾರಿಯ ಆರಂಭ, ಚಾಲ್ತಿಯಲ್ಲಿರುವ ಹಾಗೂ ಮುಕ್ತಾಯದ ಹಂತಗಳ ಛಾಯಾ ಚಿತ್ರಗಳನ್ನು ದಾಖಲಿಸಿ, ಮೂರನೇ ಹಂತದ ಪರಿವೀಕ್ಷಣೆಗೆ ಒಳಪಡಿಸಿ, ಅಂತಿಮ ಬಿಲ್ ಪಾವತಿ ಮಾಡುವುದು. ಪೂರ್ಣಗೊಂಡ ಪ್ರತಿಯೊಂದು ಕಾಮಗಾರಿಯ ಛಾಯಾ ಚಿತ್ರಗಳು ಹಾಗೂ ವೆಚ್ಚದ ವಿವರಗಳನ್ನು ಇ–ಮೇಲ್ ಮುಖಾಂತರ **(secyrelief-rev@karnataka.gov.in)** ಕಳುಹಿಸುವುದು.

9) ಪ್ರತಿಯೊಂದು ಕಾಮಗಾರಿಯ ವಿವರಗಳನ್ನು ಫಲಕದಲ್ಲಿ ಸಾರ್ವಜನಿಕರಿಗೆ ಕಾಣುವಂತೆ ಈ ಕೆಳಕಂಡ ಮಾದರಿಯಲ್ಲಿ ನಮೂದಿಸುವುದು.

**ಪ್ರಕೃತಿ ವಿಕೋಪ ಕಾಮಗಾರಿ**

| | |
|---|---|
| ಕಾಮಗಾರಿಯ ಹೆಸರು: | |
| ಅಂದಾಜು ಮೊತ್ತ: | |
| ಕಾಮಗಾರಿ ಪ್ರಾರಂಭಿಸಿದ ದಿನಾಂಕ: | |
| ಕಾಮಗಾರಿ ಮುಕ್ತಾಯವಾದ ದಿನಾಂಕ: | |
| ಅನುಷ್ಠಾನಗೊಳಿಸಿದ ಸಂಸ್ಥೆ: | |

10) ಪ್ರತಿ ತಿಂಗಳು ಅಂತ್ಯಕ್ಕೆ ಅನುದಾನ ಬಳಕೆಯಾದ ವಿವರಗಳನ್ನು ಮೇಲ್ಕಂಡ ಇ–ಮೇಲ್ ಮುಖಾಂತರ ಸಲ್ಲಿಸುವುದು. ಬಳಕೆ ಪ್ರಮಾಣ ಪತ್ರಗಳನ್ನೂ ಸಹ ತಪ್ಪದೇ ಸರ್ಕಾರಕ್ಕೆ ರವಾನಿಸುವುದು.

11) ಪ್ರತಿ ತಿಂಗಳು ಸಾಧಿಸಿದ ಪ್ರಗತಿಯನ್ನು ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿಗಳ ಹಾಗೂ ಪ್ರಾದೇಶಿಕ ಆಯುಕ್ತರ ಗಮನಕ್ಕೆ ತರುವುದು ಮತ್ತು ಅವರಿಂದ ಸಲಹೆ–ಸೂಚನೆಗಳನ್ನು ಪಡೆಯುವುದು.

12) ಅನುದಾನ ಲಭ್ಯತೆ ಇಲ್ಲದೇ ಯಾವುದೇ ದುರಸ್ತಿ ಕಾಮಗಾರಿಗಳನ್ನು ಎಸ್.ಡಿ.ಆರ್.ಎಫ್/ ಎನ್.ಡಿ.ಆರ್.ಎಫ್ ಅಡಿಯಲ್ಲಿ ಕೈಗೊಳ್ಳುವಂತಿಲ್ಲ. ಹಾಗೂ ಕಾಮಗಾರಿಗಳನ್ನು ಬಿಡುಗಡೆಯಾದ ಅನುದಾನಕ್ಕೆ ಸೀಮಿತಗೊಳಿಸುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಎಸ್.ಡಿ.ಆರ್.ಎಫ್ ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ 2012–13ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2245–01–102–0–00–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂ: FD-392, Exp-7/2012, Dt: 05-04-2012 ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎಂ. ಆನಂದಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ
(ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2).

**ಪಿ.ಆರ್. 1273**

## ಲೋಕೋಪಯೋಗಿ, ಬಂದರುಗಳು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ:** ಮೈಸೂರು ಜಿಲ್ಲೆ, ಹೆಚ್.ಡಿ. ಕೋಟೆ ತಾಲ್ಲೂಕು ದೊಮ್ಮನಕಟ್ಟೆಯಿಂದ–ಹೊನ್ನಮ್ಮನಕಟ್ಟೆ –ನಿಶ್ನ–ಎ– ಹೊಸಹೊಳಲು–ಕೆ.ಆರ್.ಪುರ–ಮಳಲಿ–ಎನ್.ಬೆಳತ್ತೂರು–ಕಾರಾಪುರ–ಎಂ.ಗಂಡತ್ತೂರು, ಮಾರ್ಗ ಉದ್ಬೂರು ಗೇಟ್‌ನಲ್ಲಿ ಕೊರಟಗೆರೆ–ಬಾವಲಿ ರಾಜ್ಯ ಹೆದ್ದಾರಿ–33 ನ್ನು ಸೇರುವ ರಸ್ತೆ ಸರಪಳಿ 0.00 ರಿಂದ 14.02 ಕಿ.ಮೀ. ವರೆಗೆ ರಸ್ತೆ ಅಭಿವೃದ್ಧಿಪಡಿಸುವ ಕಾಮಗಾರಿಯ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ದಕ್ಷಿಣ), ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ/ಸಂಕದ/ರಶಾ/ಸಇಂ1/2011–12 ದಿನಾಂಕ: 11.01.2012.

**ಪ್ರಸ್ತಾವನೆ:–**

1. ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಪ್ರೊಜೆಕ್ಟ್ ಟೈಗರ್) ಇವರು ತಮ್ಮ ಟಿಪ್ಪಣಿ ಸಂಖ್ಯೆ: FCS/PT/NH/2008-09 ದಿನಾಂಕ: 19.12.2011 ರಲ್ಲಿ ಮೈಸೂರು ಜಿಲ್ಲೆ, ಹೆಚ್.ಡಿ. ಕೋಟೆ ತಾಲ್ಲೂಕಿನ ದೊಮ್ಮನಕಟ್ಟೆ ಉದ್ಬೂರು ಗೇಟ್ ಮಧ್ಯದ ರಸ್ತೆ (ಸರಪಳಿ 0.00 ಕಿ.ಮೀ. ಯಿಂದ 14.02 ಕಿ.ಮೀ.) ಯನ್ನು ಮೇಲ್ದರ್ಜೆಗೇರಿಸುವಂತೆ ಮತ್ತು ಸದರಿ ರಸ್ತೆಯನ್ನು ರಾಜ್ಯ ಹೆದ್ದಾರಿ–33 (ಸರಪಳಿ 60.60 ಕಿ.ಮೀ. ಯಿಂದ 69.75 ರವರೆಗೆ) ರಕ್ಷಿತ ಅರಣ್ಯ ಪ್ರದೇಶದಲ್ಲಿರುವ ನಿಷೇಧಿತ ರಸ್ತೆಗೆ ಪರ್ಯಾಯವಾಗಿ ಲೋಕೋಪಯೋಗಿ ಇಲಾಖೆಯಿಂದ ಅಭಿವೃದ್ಧಿಪಡಿಸುವಂತೆ ಕೋರಿರುತ್ತಾರೆ. ಕರ್ನಾಟಕದ ಸನ್ಮಾನ್ಯ ಮುಖ್ಯಮಂತ್ರಿಯವರು ಕೇರಳದ ಮಾನ್ಯ ಮುಖ್ಯ ಮಂತ್ರಿಯವರಿಗೆ ದಿನಾಂಕ:18.12.2011ರಂದು ಬೆಂಗಳೂರಿನಲ್ಲಿ ನಡೆದ ಸಭೆಯಲ್ಲಿ ದೊಮ್ಮನಕಟ್ಟೆಯಿಂದ ಉದ್ಬೂರು ಗೇಟ್ ವರೆಗಿನ 14.00 ಕಿ.ಮೀ. ಉದ್ದದ ರಸ್ತೆಯನ್ನು ಅಭಿವೃದ್ಧಿಪಡಿಸುವ ಭರವಸೆಯನ್ನು ನೀಡಿರುವ ಬಗ್ಗೆ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಇವರು ಪ್ರಸ್ತಾಪಿಸಿರುತ್ತಾರೆ.

2. ಮೇಲೆ ಓದಲಾದ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ದಕ್ಷಿಣ), ಬೆಂಗಳೂರು, ಇವರ ಪತ್ರದಲ್ಲಿ ಮೈಸೂರು ಜಿಲ್ಲೆ, ಹೆಚ್.ಡಿ. ಕೋಟೆ ತಾಲ್ಲೂಕು ದೊಮ್ಮನಕಟ್ಟೆಯಿಂದ–ಹೊನ್ನಮ್ಮನಕಟ್ಟೆ–ನಿಶ್ನ – ಎ– ಹೊಸಹೊಳಲು –ಕೆ.ಆರ್.ಪುರ–ಮಳಲಿ–ಎನ್. ಬೆಳತ್ತೂರು ಕಾರಾಪುರ–ಎಂ. ಗಂಡತ್ತೂರು ಮಾರ್ಗ ಉದ್ಬೂರು ಗೇಟ್‌ನಲ್ಲಿ ಕೊರಟಗೆರೆ–ಬಾವಲಿ ರಾಜ್ಯ ಹೆದ್ದಾರಿ–33 ನ್ನು ಸೇರುವ ರಸ್ತೆ ಸರಪಳಿ 0.00 ರಿಂದ 14.02 ಕಿ.ಮೀ. ವರೆಗೆ ರಸ್ತೆ ಅಭಿವೃದ್ಧಿಗೆ ರೂ.18.00 ಕೋಟಿಗಳ ಮೊತ್ತಕ್ಕೆ ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆ ಸಲ್ಲಿಸಲಾಗಿರುತ್ತದೆ.

3. ದಿನಾಂಕ: 7.2.2012 ರಂದು ಮಾನ್ಯ ಲೋಕೋಪಯೋಗಿ ಸಚಿವರು ಹಾಗೂ ಅರಣ್ಯ ಸಚಿವರ ಜಂಟಿ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಚರ್ಚಿಸಿದಂತೆ, ಮೈಸೂರು–ಮಾನಂದವಾಡಿಯ ಪ್ರಸ್ತಾವಿತ 10.00 ಕಿ.ಮೀ. ಉದ್ದದ ರಸ್ತೆಯು ರಾಜೀವ್ ಗಾಂಧಿ ರಾಷ್ಟ್ರೀಯ ಉದ್ಯಾನವನದಲ್ಲಿ ಬರುತ್ತಿದ್ದು, Central Empowered Committeeಯು ಸದರಿ ರಸ್ತೆಯನ್ನು ಪರಿವೀಕ್ಷಿಸಿದೆ. ಮತ್ತು ಈ ರಸ್ತೆಗೆ ಪರ್ಯಾಯ ರಸ್ತೆಯನ್ನು ಅಭಿವೃದ್ಧಿಪಡಿಸುವಂತೆ ಸನ್ಮಾನ್ಯ ಸರ್ವೋಚ್ಚ ನ್ಯಾಯಾಲಯಕ್ಕೆ ವರದಿಯನ್ನು ಸಲ್ಲಿಸಿರುತ್ತದೆ. ಅದರಂತೆ ದೊಮ್ಮನಕಟ್ಟೆಯಿಂದ ಉದ್ಬೂರು ಗೇಟ್‌ವರೆಗೆ ಪರ್ಯಾಯವಾಗಿ 14.02 ಕಿ.ಮೀ.ನ ಗ್ರಾಮೀಣ ರಸ್ತೆಯನ್ನು ಅಭಿವೃದ್ಧಿಪಡಿಸಲು ಅಂದಾಜು ಪಟ್ಟಿಯೊಂದನ್ನು ಸಿದ್ಧಪಡಿಸಲಾಗಿದೆ. ಅರಣ್ಯ ಇಲಾಖೆಯ ಅಧಿಕಾರಿಗಳು ಅರಣ್ಯ ಇಲಾಖೆ ವ್ಯಾಪ್ತಿಯಲ್ಲಿ ಬರುವ 1.83 ಕಿ.ಮೀ. ರಸ್ತೆಯನ್ನು ಸಹ ಅಭಿವೃದ್ಧಿಪಡಿಸಲು ಸಭೆಯಲ್ಲಿ ಒಪ್ಪಿಗೆ ನೀಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ:

**ಸರ್ಕಾರದ ಆದೇಶ ಸಂಖ್ಯೆ: ಲೋಇ 659 ಸಿಆರ್‌ಎಂ 2011 ದಿನಾಂಕ: 26.04.2012.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಹಿನ್ನೆಲೆಯಲ್ಲಿ ಮೈಸೂರು ಜಿಲ್ಲೆ, ಹೆಚ್.ಡಿ. ಕೋಟೆ ತಾಲ್ಲೂಕು ದೊಮ್ಮನಕಟ್ಟೆಯಿಂದ–ಹೊನ್ನಮ್ಮನಕಟ್ಟೆ–ನಿಶ್ನ–ಎ–ಹೊಸಹೊಳಲು–ಕೆ.ಆರ್.ಪುರ–ಮಳಲಿ–ಎನ್.ಬೆಳತ್ತೂರು–ಕಾರಾಪುರ–ಎಂ.ಗಂಡತ್ತೂರು ಮಾರ್ಗ ಉದ್ಬೂರು ಗೇಟ್‌ನಲ್ಲಿ ಕೊರಟಗೆರೆ–ಬಾವಲಿ ರಾಜ್ಯ ಹೆದ್ದಾರಿ–33 ನ್ನು ಸೇರುವ ರಸ್ತೆ ಸರಪಳಿ 0.00 ರಿಂದ 14.02 ಕಿ.ಮೀ. ವರೆಗೆ ರಸ್ತೆ ಅಭಿವೃದ್ಧಿಪಡಿಸುವ ಕಾಮಗಾರಿಯ ಅಂದಾಜು ಮೊತ್ತ ರೂ.18.00 ಕೋಟಿಗಳಿಗೆ (ಹದಿನೆಂಟು ಕೋಟಿ ರೂಪಾಯಿಗಳು ಮಾತ್ರ) ಆಡಳಿತಾತ್ಮಕ ಅನುಮೋದನೆ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಲೋಇ 133/ಆಕೋ–1/12 ದಿನಾಂಕ: 17.02.2012 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಆರ್.ರೇವಣ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರುಗಳು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

**ಪಿ.ಆರ್. 1308**

## ಕಂದಾಯ ಸಚಿವಾಲಯ

**ವಿಷಯ :–** 2012–13ನೇ ಸಾಲಿನಲ್ಲಿ ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಗೆ ಸಂಬಂಧಿಸಿದಂತೆ, ತುರ್ತು ಪರಿಹಾರ ಕ್ರಮ ಕೈಗೊಳ್ಳಲು ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :–** 1) ಹಾಸನ ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರ.

**ಪ್ರಸ್ತಾವನೆ :**

2012–13ನೇ ಸಾಲಿನಲ್ಲಿ ಮುಂಗಾರು ಮಳೆವಿಫಲವಾಗಿ, ರಾಜ್ಯದ 24 ಜಿಲ್ಲೆಗಳ 123 ತಾಲ್ಲೂಕುಗಳಲ್ಲಿ ಬರ ಪರಿಸ್ಥಿತಿ ಉಂಟಾಗಿರುತ್ತದೆ. ಬರ ಪರಿಸ್ಥಿತಿಯನ್ನು ಎದುರಿಸಲು ಕುಡಿಯುವ ನೀರು ಸರಬರಾಜು, ಜಾನುವಾರುಗಳಿಗೆ ಮೇವುಒಒದಗಿಸುವ ಮತ್ತು ಜಾನುವಾರು ಸಂರಕ್ಷಣೆ ಕಾರ್ಯಗಳನ್ನು ಕೈಗೊಳ್ಳಬೇಕಾಗಿರುತ್ತದೆ. ಆದ್ದರಿಂದ ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಯನ್ನು ನಿಭಾಯಿಸಲು ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವಂತೆ ಹಾಸನ ಜಿಲ್ಲಾಧಿಕಾರಿಗಳು ಪತ್ರದ ಮುಖೇನ ಬೇಡಿಕೆ ಸಲ್ಲಿಸಿರುತ್ತಾರೆ. ಈ ಹಿನ್ನಲೆಯಲ್ಲಿ, ಜಿಲ್ಲಾಧಿಕಾರಿಗಳ ಪ್ರಸ್ತಾವನೆಗಳನ್ನು ಕೂಲಂಕಷವಾಗಿ, ಪರಿಶೀಲಿಸಿ, ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿಯನ್ನು ನಿಭಾಯಿಸಲು ರಾಜ್ಯ ವಿಪತ್ತು, ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 149 ಟಿಎನ್‌ಆರ್ 2012(2), ಬೆಂಗಳೂರು, ದಿನಾಂಕ: 26–04–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮುಂಗಾರು ಮಳೆಯ ಕೊರತೆಯಿಂದ ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಗೆ ಸಂಬಂಧಿಸಿದಂತೆ ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ರೂ.300 ಲಕ್ಷ (ರೂ.ಮುನ್ನೂರು ಲಕ್ಷಗಳು ಮಾತ್ರ) ಗಳನ್ನು ಜಿಲ್ಲಾಧಿಕಾರಿಗಳು ಹಾಸನ ಜಿಲ್ಲೆ, ಹಾಸನ ಇವರಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

1) ಕೇಂದ್ರ ಸರ್ಕಾರವು ಹೊರಡಿಸಿರುವ ಮಾರ್ಗಸೂಚಿಗಳ ಪ್ರಕಾರ ಅನುದಾನವನ್ನು ವೆಚ್ಚ ಮಾಡುವುದು.

2) ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನವನ್ನು ಜಿಲ್ಲಾಧಿಕಾರಿಗಳು ಮತ್ತು ಮುಖ್ಯ ಕಾರ್ಯನಿರ್ವಹಕಾಧಿಕಾರಿಗಳು ಸಮಾಲೋಚಿಸಿ

   ಅ) ಕುಡಿಯುವ ನೀರಿನ ವ್ಯವಸ್ಥೆ, ಹಾಗೂ

   ಆ) ಜಾನುವಾರುಗಳ ಸಂರಕ್ಷಣೆಗಾಗಿ ಮಾತ್ರ ಅನುದಾನವನ್ನು ಬಳಸುವುದು.

3) ಜಿಲ್ಲಾ ಉಸ್ತುವಾರಿ ಸಚಿವರುಗಳು ಜಿಲ್ಲಾ ಮಟ್ಟದ ಸಭೆಗಳನ್ನು ತಿಂಗಳಿಗೊಮ್ಮೆ ನಡೆಸಿ ಬರಪರಿಸ್ಥಿತಿಯ ಬಗ್ಗೆ ಅವಲೋಕನ ಮಾಡುವುದು ಮತ್ತು ಸರ್ಕಾರದಿಂದ ಮಂಜೂರಾಗಿರುವ ಅನುದಾನವನ್ನು ಕುಡಿಯುವ ನೀರು, ಜಾನುವಾರು ಸಂರಕ್ಷಣೆ ಮತ್ತು ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವತಿಯಿಂದ ಮಂಜೂರಾಗಿರುವ ಅನುದಾನವನ್ನು ಕುಡಿಯುವ ನೀರಿನ ಯೋಜನೆಗಳು, ಕೊಳವೆ ಬಾವಿ ತೆರೆಯುವುದು ಹಾಗೂ ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಡಿ ಸಾಧಿಸುವ ಪ್ರಗತಿಯನ್ನು ವಿಶೇಷವಾಗಿ ಪರಿಶೀಲಿಸುವುದು. ಈ ಬಗ್ಗೆ ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿರವರುಗಳು ಆಯಾ ಜಿಲ್ಲಾ ಸಚಿವರೊಡನೆ ನಿಕಟ ಸಂಪರ್ಕವಿರಿಸಿಕೊಂಡು ಸಭೆಗಳನ್ನು ಆಯೋಜಿಸಲು ಕ್ರಮ ವಹಿಸುವುದು.

4) ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿಗಳು ಜಿಲ್ಲಾ ಮಟ್ಟದ ಸಭೆಗಳನ್ನು ತಿಂಗಳಿಗೊಮ್ಮೆ ನಡೆಸಿ ಬರಪರಿಸ್ಥಿತಿಯ ಬಗ್ಗೆ ಅವಲೋಕನ ಮಾಡುವುದು ಮತ್ತು ಸರ್ಕಾರದಿಂದ ಮಂಜೂರಾಗಿರುವ ಅನುದಾನವನ್ನು ಕುಡಿಯುವ ನೀರು, ಜಾನುವಾರು ಸಂರಕ್ಷಣೆ ಮತ್ತು ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವತಿಯಿಂದ ಮಂಜೂರಾಗಿರುವ ಅನುದಾನವನ್ನು ಕುಡಿಯುವ ನೀರಿನ ಯೋಜನೆಗಳು, ಕೊಳವೆ ಬಾವಿ ತೆರೆಯುವುದು ಹಾಗೂ ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಡಿ ಸಾಧಿಸುವ ಪ್ರಗತಿಯನ್ನು ವಿಶೇಷವಾಗಿ ಪರಿಶೀಲಿಸುವುದು. ಪ್ರತಿ ತಿಂಗಳ 5ನೇ ತಾರೀಖಿನೊಳಗೆ ಸಭೆಗಳ ನಡೆವಳಿಗಳನ್ನು ಸರ್ಕಾರಕ್ಕೆ ಸಲ್ಲಿಸುವುದು.

5) ಪ್ರತಿ ತಾಲ್ಲೂಕಿನಲ್ಲಿ ಶಾಸಕರ ಅಧ್ಯಕ್ಷತೆಯಲ್ಲಿ ಬರಪರಿಹಾರ ಕಾಮಗಾರಿಗಳಿಗೆ ಸಂಬಂಧಿಸಿದಂತೆ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯನ್ನೂ ಸೇರಿಸಿದಂತೆ ಕ್ರಿಯಾ ಯೋಜನೆಗಳನ್ನು ಸಿದ್ಧಪಡಿಸಿ ಜಿಲ್ಲಾ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿ ಸಭೆ ಕರೆದು ಸಿದ್ಧಪಡಿಸಿದ ಹಾಗೂ ಅನುಮೋದಿಸಿದ ಕಾರ್ಯ ಯೋಜನೆಗಳನ್ನು ಯುದ್ಧೋಪಾದಿಯಲ್ಲಿ ಜಾರಿಗೊಳಿಸುವುದು.

6) ಬರಪೀಡಿತ ಪ್ರದೇಶಗಳಿಗೆ ಜಿಲ್ಲಾಧಿಕಾರಿಗಳು ಹಾಗೂ ಮುಖ್ಯ ಕಾರ್ಯನಿರ್ವಹಕಾಧಿಕಾರಿಗಳು ವ್ಯಾಪಕವಾಗಿ ಪ್ರವಾಸ ಮಾಡುವುದು ಹಾಗೂ ಯಾವುದೇ ಗ್ರಾಮದಲ್ಲಿ ಕುಡಿಯುವ ನೀರು ಹಾಗೂ ಜಾನುವಾರುಗಳಿಗೆ ಸಂಬಂಧಪಟ್ಟ ಸಮಸ್ಯೆಗಳು ಉದ್ಭವವಾಗದಂತೆ ನೋಡಿಕೊಳ್ಳುವುದು. ಬರಪೀಡಿತ ಪ್ರದೇಶದಲ್ಲಿ ಜನರು ಗುಳೇ ಹೋಗುವುದನ್ನು ತಡೆಗಟ್ಟಲು ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಡಿ ಕಾಮಗಾರಿಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಬೇಡಿಕೆಗನುಗುಣವಾಗಿ ಅನುಷ್ಠಾನಗೊಳಿಸುವುದು.

7) ಕುಡಿಯುವ ನೀರಿನ ಸಮಸ್ಯೆಗಳನ್ನು ಬಗೆಹರಿಸಲು ತಾಲ್ಲೂಕಿಗೊಂದು ಸಹಾಯವಾಣಿಯನ್ನು ಸ್ಥಾಪಿಸಿ, ತಾಂತ್ರಿಕ ಸಿಬ್ಬಂದಿಯನ್ನು ನಿಯೋಜಿಸಿ 24 ಗಂಟೆಯೊಳಗಾಗಿ ಕುಡಿಯುವ ನೀರಿನ ಸಮಸ್ಯೆಗಳನ್ನು ಬಗೆಹರಿಸುವುದು.

8) ಪ್ರತಿ 15 ದಿನಗಳಿಗೊಮ್ಮೆ ಜಿಲ್ಲಾಧಿಕಾರಿಗಳು ಮತ್ತು ಮುಖ್ಯ ಕಾರ್ಯನಿರ್ವಹಕಾಧಿಕಾರಿಗಳು ಜಂಟಿಯಾಗಿ ಬರ ಪರಿಹಾರ ಕಾಮಗಾರಿಗಳ ಬಗ್ಗೆ ಪತ್ರಿಕಾ ಗೋಷ್ಠಿ ನಡೆಸಿ ಮಾಧ್ಯಮಗಳಿಗೆ ಜಿಲ್ಲೆಯಲ್ಲಿ ಕೈಗೊಂಡಿರುವ ಕುಡಿಯುವ ನೀರು, ಜಾನುವಾರು ಸಂರಕ್ಷಣೆ, ಉದ್ಯೋಗ ಖಾತರಿ ಯೋಜನೆ ಮತ್ತು ಬರಪರಿಹಾರಕ್ಕೆ ಸಂಬಂಧಿಸಿದಂತೆ ಸಾಧಿಸಿರುವ ಪ್ರಗತಿಯ ಚಿತ್ರಣವನ್ನು ಬಿಂಬಿಸುವುದು. ಪತ್ರಿಕಾಗೋಷ್ಠಿಯಲ್ಲಿ ಸಿದ್ಧಪಡಿಸಿದ ಟಿಪ್ಪಣಿಯನ್ನು ಇ–ಮೇಲ್ ಮುಖಾಂತರ ಸರ್ಕಾರಕ್ಕೆ ರವಾನಿಸುವುದು. ಇ–ಮೇಲ್ ವಿಳಾಸ secyrelief-rev@karnataka.gov.in.

9) ಪ್ರತಿ ಹೋಬಳಿಗೆ ಒಬ್ಬ ಜಿಲ್ಲಾ ಮಟ್ಟದ ನೋಡಲ್ ಅಧಿಕಾರಿಯನ್ನು ನೇಮಿಸಿ ಅವರ ಮೂಲಕ ಬರಪರಿಹಾರ ಕಾಮಗಾರಿಗಳು, ಜಾನುವಾರು ಸಂರಕ್ಷಣೆ ಮತ್ತು ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ನಿರ್ವಹಿಸಲಾಗುತ್ತಿರುವ ಕಾಮಗಾರಿಗಳನ್ನು ವ್ಯಾಪಕವಾಗಿ ಪರಿಶೀಲನೆ ಮಾಡುವುದು.

10) ಮುಂದಿನ 2 ತಿಂಗಳುಗಳ ಕಾಲ ಕುಡಿಯುವ ನೀರು/ ಮೇವಿನ ಕೊರತೆ ಹಾಗೂ ಉದ್ಯೋಗಕ್ಕೆ ಕೊರತೆಯುಂಟಾಗದಂತೆ ಹಾಗೂ ಯಾವುದೇ ದೂರುಗಳು ಬರದಂತೆ ಕಾರ್ಯ ನಿರ್ವಹಿಸುವುದು.

11) ಪ್ರತಿಯೊಂದು ಕಾಮಗಾರಿಯ ಆರಂಭ, ಚಾಲ್ತಿಯಲ್ಲಿರುವ ಹಾಗೂ ಮುಕ್ತಾಯದ ಹಂತಗಳ ಛಾಯಾ ಚಿತ್ರಗಳನ್ನು ದಾಖಲಿಸಿ, ಮೂರನೇ ಹಂತದ ಪರಿವೀಕ್ಷಣೆಗೆ ಒಳಪಡಿಸಿ, ಅಂತಿಮ ಬಿಲ್ ಪಾವತಿ ಮಾಡುವುದು.

12) ಪೂರ್ಣಗೊಂಡ ಪ್ರತಿಯೊಂದು ಕಾಮಗಾರಿಯ ಛಾಯಾ ಚಿತ್ರಗಳು ಹಾಗೂ ವೆಚ್ಚದ ವಿವರಗಳನ್ನು ಇ–ಮೇಲ್ ಮುಖಾಂತರ (secyrelief-rev@karnataka.gov.in) ಕಳುಹಿಸುವುದು

13) ಪ್ರತಿಯೊಂದು ಕಾಮಗಾರಿಯ ವಿವರಗಳನ್ನು ಫಲಕದಲ್ಲಿ ಸಾರ್ವಜನಿಕರಿಗೆ ಕಾಣುವಂತೆ ಈ ಕೆಳಕಂಡ ಮಾದರಿಯಲ್ಲಿ ನಮೂದಿಸುವುದು.

**ಪ್ರಕೃತಿ ವಿಕೋಪ ಕಾಮಗಾರಿ**

| | |
|---|---|
| ಕಾಮಗಾರಿಯ ಹೆಸರು: | |
| ಅಂದಾಜು ಮೊತ್ತ: | |
| ಕಾಮಗಾರಿ ಪ್ರಾರಂಭಿಸಿದ ದಿನಾಂಕ: | |
| ಕಾಮಗಾರಿ ಮುಕ್ತಾಯವಾದ ದಿನಾಂಕ: | |
| ಅನುಷ್ಠಾನಗೊಳಿಸಿದ ಸಂಸ್ಥೆ: | |

14) ಪ್ರತಿ ತಿಂಗಳು ಅಂತ್ಯಕ್ಕೆ ಅನುದಾನ ಬಳಕೆಯಾದ ವಿವರಗಳನ್ನು ಮೇಲ್ಕಂಡ ಇ–ಮೇಲ್ ಮುಖಾಂತರ ಸಲ್ಲಿಸುವುದು. ಬಳಕೆ ಪ್ರಮಾಣ ಪತ್ರಗಳನ್ನೂ ಸಹ ತಪ್ಪದೇ ಸರ್ಕಾರಕ್ಕೆ ರವಾನಿಸುವುದು.

15) ಪ್ರತಿ ತಿಂಗಳು ಸಾಧಿಸಿದ ಪ್ರಗತಿಯನ್ನು ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿಗಳ ಹಾಗೂ ಪ್ರಾದೇಶಿಕ ಆಯುಕ್ತರ ಗಮನಕ್ಕೆ ತರುವುದು ಮತ್ತು ಅವರಿಂದ ಸಲಹೆ–ಸೂಚನೆಗಳನ್ನು ಪಡೆಯುವುದು.

16) ಅನುದಾನ ಲಭ್ಯತೆ ಇಲ್ಲದೇ ಯಾವುದೇ ದುರಸ್ತಿ ಕಾಮಗಾರಿಗಳನ್ನು ಎಸ್.ಡಿ.ಆರ್.ಎಫ್/ ಎನ್.ಡಿ.ಆರ್.ಎಫ್ ಅಡಿಯಲ್ಲಿ ಕೈಗೊಳ್ಳುವಂತಿಲ್ಲ. ಹಾಗೂ ಕಾಮಗಾರಿಗಳನ್ನು ಬಿಡುಗಡೆಯಾದ ಅನುದಾನಕ್ಕೆ ಸೀಮಿತಗೊಳಿಸುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಎಸ್.ಡಿ.ಆರ್.ಎಫ್ ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ 2012–13ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2245–01–102–0–00–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ:ಆ.ಇ 243 ವೆಚ್ಚ–7/2012, ದಿನಾಂಕ: 15–04–2012ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಎಂ.ಮಲ್ಲಿಕಾರ್ಜುನಸ್ವಾಮಿ,**
ಸರ್ಕಾರದ ಉಪ ಕಾರ್ಯದರ್ಶಿ,
ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ).

**ಪಿ.ಆರ್. 1310**

## ಕಂದಾಯ ಸಚಿವಾಲಯ

**ವಿಷಯ :**– 2012–13ನೇ ಸಾಲಿನಲ್ಲಿ ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಗೆ ಸಂಬಂಧಿಸಿದಂತೆ, ತುರ್ತು ಪರಿಹಾರ ಕ್ರಮ ಕೈಗೊಳ್ಳಲು ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**– ಕೋಲಾರ ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರ.

**ಪ್ರಸ್ತಾವನೆ :**

2012–13ನೇ ಸಾಲಿನಲ್ಲಿ ಮುಂಗಾರು ಮಳೆವಿಫಲವಾಗಿ, ರಾಜ್ಯದ 24 ಜಿಲ್ಲೆಗಳ 123 ತಾಲ್ಲೂಕುಗಳಲ್ಲಿ ಬರ ಪರಿಸ್ಥಿತಿ ಉಂಟಾಗಿರುತ್ತದೆ. ಬರ ಪರಿಸ್ಥಿತಿಯನ್ನು ಎದುರಿಸಲು ಕುಡಿಯುವ ನೀರು ಸರಬರಾಜು, ಜಾನುವಾರುಗಳಿಗೆ ಮೇವುಒದಗಿಸುವ ಮತ್ತು ಜಾನುವಾರು ಸಂರಕ್ಷಣೆ ಕಾರ್ಯಗಳನ್ನು ಕೈಗೊಳ್ಳಬೇಕಾಗಿರುತ್ತದೆ. ಆದ್ದರಿಂದ ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಯನ್ನು ನಿಭಾಯಿಸಲು ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವಂತೆ ಕೋಲಾರ ಜಿಲ್ಲಾಧಿಕಾರಿಗಳು ಪತ್ರಗಳ ಮುಖೇನ ಬೇಡಿಕೆ ಸಲ್ಲಿಸಿರುತ್ತಾರೆ. ಈ ಹಿನ್ನಲೆಯಲ್ಲಿ, ಜಿಲ್ಲಾಧಿಕಾರಿಗಳ ಪ್ರಸ್ತಾವನೆಗಳನ್ನು ಕೂಲಂಕಷವಾಗಿ, ಪರಿಶೀಲಿಸಿ, ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿಯನ್ನು ನಿಭಾಯಿಸಲು ರಾಜ್ಯ ವಿಪತ್ತು, ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 149 ಟಿಎನ್‌ಆರ್ 2012(1), ಬೆಂಗಳೂರು, ದಿನಾಂಕ: 26–04–2012 (P)**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮುಂಗಾರು ಮಳೆಯ ಕೊರತೆಯಿಂದ ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಗೆ ಸಂಬಂಧಿಸಿದಂತೆ ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ರೂ.250ಲಕ್ಷ (ರೂಪಾಯಿ ಇನ್ನೂರ ಐವತ್ತು ಲಕ್ಷಗಳು ಮಾತ್ರ) ಗಳನ್ನು ಜಿಲ್ಲಾಧಿಕಾರಿಗಳು ಕೋಲಾರ ಜಿಲ್ಲೆ, ಕೋಲಾರ ಇವರಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

1) ಕೇಂದ್ರ ಸರ್ಕಾರವು ಹೊರಡಿಸಿರುವ ಮಾರ್ಗಸೂಚಿಗಳ ಪ್ರಕಾರ ಅನುದಾನವನ್ನು ವೆಚ್ಚ ಮಾಡುವುದು.

2) ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನವನ್ನು ಜಿಲ್ಲಾಧಿಕಾರಿಗಳು ಮತ್ತು ಮುಖ್ಯ ಕಾರ್ಯನಿರ್ವಹಕಾಧಿಕಾರಿಗಳು ಸಮಾಲೋಚಿಸಿ
   ಅ) ಕುಡಿಯುವ ನೀರಿನ ವ್ಯವಸ್ಥೆ, ಹಾಗೂ
   ಆ) ಜಾನುವಾರುಗಳ ಸಂರಕ್ಷಣೆಗಾಗಿ ಮಾತ್ರ ಅನುದಾನವನ್ನು ಬಳಸುವುದು.

3) ಜಿಲ್ಲಾಉಸ್ತುವಾರಿ ಸಚಿವರುಗಳು ಜಿಲ್ಲಾ ಮಟ್ಟದ ಸಭೆಗಳನ್ನು ತಿಂಗಳಿಗೊಮ್ಮೆ ನಡೆಸಿ ಬರಪರಿಸ್ಥಿತಿಯ ಬಗ್ಗೆ ಅವಲೋಕನ ಮಾಡುವುದು ಮತ್ತು ಸರ್ಕಾರದಿಂದ ಮಂಜೂರಾಗಿರುವ ಅನುದಾನವನ್ನು ಕುಡಿಯುವ ನೀರು, ಜಾನುವಾರು ಸಂರಕ್ಷಣೆ ಮತ್ತು ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವತಿಯಿಂದ ಮಂಜೂರಾಗಿರುವ ಅನುದಾನವನ್ನು ಕುಡಿಯುವ ನೀರಿನ ಯೋಜನೆಗಳು, ಕೊಳವೆ ಬಾವಿ ತೆರೆಯುವುದು ಹಾಗೂ ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಡಿ ಸಾಧಿಸುವ ಪ್ರಗತಿಯನ್ನು ವಿಶೇಷವಾಗಿ ಪರಿಶೀಲಿಸುವುದು. ಈ ಬಗ್ಗೆ ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿರವರುಗಳು ಆಯಾ ಜಿಲ್ಲಾ ಸಚಿವರೊಡನೆ ನಿಕಟ ಸಂಪರ್ಕವಿರಿಸಿಕೊಂಡು ಸಭೆಗಳನ್ನು ಆಯೋಜಿಸಲು ಕ್ರಮ ವಹಿಸುವುದು.

4) ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿಗಳು ಜಿಲ್ಲಾ ಮಟ್ಟದ ಸಭೆಗಳನ್ನು ತಿಂಗಳಿಗೊಮ್ಮೆ ನಡೆಸಿ ಬರಪರಿಸ್ಥಿತಿಯ ಬಗ್ಗೆ ಅವಲೋಕನ ಮಾಡುವುದು ಮತ್ತು ಸರ್ಕಾರದಿಂದ ಮಂಜೂರಾಗಿರುವ ಅನುದಾನವನ್ನು ಕುಡಿಯುವ ನೀರು, ಜಾನುವಾರು ಸಂರಕ್ಷಣೆ ಮತ್ತು ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವತಿಯಿಂದ ಮಂಜೂರಾಗಿರುವ ಅನುದಾನವನ್ನು ಕುಡಿಯುವ ನೀರಿನ ಯೋಜನೆಗಳು, ಕೊಳವೆ ಬಾವಿ ತೆರೆಯುವುದು ಹಾಗೂ ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಡಿ ಸಾಧಿಸುವ ಪ್ರಗತಿಯನ್ನು ವಿಶೇಷವಾಗಿ ಪರಿಶೀಲಿಸುವುದು. ಪ್ರತಿ ತಿಂಗಳ 5ನೇ ತಾರೀಖಿನೊಳಗೆ ಸಭೆಗಳ ನಡೆವಳಿಗಳನ್ನು ಸರ್ಕಾರಕ್ಕೆ ಸಲ್ಲಿಸುವುದು.

5) ಪ್ರತಿ ತಾಲ್ಲೂಕಿನಲ್ಲಿ ಶಾಸಕರ ಅಧ್ಯಕ್ಷತೆಯಲ್ಲಿ ಬರಪರಿಹಾರ ಕಾಮಗಾರಿಗಳಿಗೆ ಸಂಬಂಧಿಸಿದಂತೆ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯನ್ನೂ ಸೇರಿಸಿದಂತೆ ಕ್ರಿಯಾ ಯೋಜನೆಗಳನ್ನು ಸಿದ್ಧಪಡಿಸಿ ಜಿಲ್ಲಾ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿ ಸಭೆ ಕರೆದು ಸಿದ್ಧಪಡಿಸಿದ ಹಾಗೂ ಅನುಮೋದಿಸಿದ ಕಾರ್ಯ ಯೋಜನೆಗಳನ್ನು ಯುದ್ಧೋಪಾದಿಯಲ್ಲಿ ಜಾರಿಗೊಳಿಸುವುದು.

6) ಬರಪೀಡಿತ ಪ್ರದೇಶಗಳಿಗೆ ಜಿಲ್ಲಾಧಿಕಾರಿಗಳು ಹಾಗೂ ಮುಖ್ಯ ಕಾರ್ಯನಿರ್ವಹಕಾಧಿಕಾರಿಗಳು ವ್ಯಾಪಕವಾಗಿ ಪ್ರವಾಸ ಮಾಡುವುದು ಹಾಗೂ ಯಾವುದೇ ಗ್ರಾಮದಲ್ಲಿ ಕುಡಿಯುವ ನೀರು ಹಾಗೂ ಜಾನುವಾರುಗಳಿಗೆ ಸಂಬಂಧಪಟ್ಟ ಸಮಸ್ಯೆಗಳು ಉದ್ಭವವಾಗದಂತೆ ನೋಡಿಕೊಳ್ಳುವುದು. ಬರಪೀಡಿತ ಪ್ರದೇಶದಲ್ಲಿ ಜನರು ಗುಳೇ ಹೋಗುವುದನ್ನು ತಡೆಗಟ್ಟಲು ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಡಿ ಕಾಮಗಾರಿಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಬೇಡಿಕೆಗನುಗುಣವಾಗಿ ಅನುಷ್ಠಾನಗೊಳಿಸುವುದು.

7) ಕುಡಿಯುವ ನೀರಿನ ಸಮಸ್ಯೆಗಳನ್ನು ಬಗೆಹರಿಸಲು ತಾಲ್ಲೂಕಿಗೊಂದು ಸಹಾಯವಾಣಿಯನ್ನು ಸ್ಥಾಪಿಸಿ, ತಾಂತ್ರಿಕ ಸಿಬ್ಬಂದಿಯನ್ನು ನಿಯೋಜಿಸಿ 24 ಗಂಟೆಯೊಳಗಾಗಿ ಕುಡಿಯುವ ನೀರಿನ ಸಮಸ್ಯೆಗಳನ್ನು ಬಗೆಹರಿಸುವುದು.

8) ಪ್ರತಿ 15 ದಿನಗಳಿಗೊಮ್ಮೆ ಜಿಲ್ಲಾಧಿಕಾರಿಗಳು ಮತ್ತು ಮುಖ್ಯ ಕಾರ್ಯನಿರ್ವಹಕಾಧಿಕಾರಿಗಳು ಜಂಟಿಯಾಗಿ ಬರ ಪರಿಹಾರ ಕಾಮಗಾರಿಗಳ ಬಗ್ಗೆ ಪತ್ರಿಕಾ ಗೋಷ್ಠಿ ನಡೆಸಿ ಮಾಧ್ಯಮಗಳಿಗೆ ಜಿಲ್ಲೆಯಲ್ಲಿ ಕೈಗೊಂಡಿರುವ ಕುಡಿಯುವ ನೀರು, ಜಾನುವಾರು ಸಂರಕ್ಷಣೆ, ಉದ್ಯೋಗ ಖಾತರಿ

| | | ಲಕ್ಷ ರೂ.ಗಳಲ್ಲಿ |
|---|---|---|
| ಅ) | 2575–60–265–0–01–059 | 15.00 ರಾಜ್ಯ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯ ಇತರೆ ವೆಚ್ಚಗಳು |
| ಆ) | 2575–60–265–0–02–059 | 135.00 ಶಾಸಕರ ಕ್ಷೇತ್ರ ಪ್ರದೇಶಾಭಿವೃದ್ಧಿ ಯೋಜನೆ ಇತರೆ ವೆಚ್ಚಗಳು |
| ಇ) | 4575–60–800–0–01–132 | 17896.85 ಬಂಡವಾಳ ವೆಚ್ಚ |
| ಈ) | 4575–60–800–0–01–422 | 8590.63 ವಿಶೇಷ ಘಟಕ ಯೋಜನೆ |
| ಉ) | 4575–60–800–0–01–423 | 3362.52 ಗಿರಿಜನ ಉಪಯೋಗಕ್ಕೆ |
| | ಒಟ್ಟು | 30000.00 |

ಈ ಯೋಜನೆಯಡಿ ಯಾವುದೇ ಮಾರ್ಪಾಟು ಇಲ್ಲದಿರುವುದರಿಂದ ಉಲ್ಲೇಖ–1ರಲ್ಲಿನ ಸುತ್ತೋಲೆಯನ್ವಯ ದಿನಾಂಕ : 13–04–2012ರಂದು ಪ್ರಧಾನ ಕಾರ್ಯದರ್ಶಿ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಈ ಯೋಜನೆಯನ್ನು 2012–13ನೇ ಸಾಲಿನಲ್ಲಿ ಮುಂದುವರೆಸಲು ನಿರ್ಣಯಿಸಲಾಯಿತು. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 40 ಯೋವಿವಿ 2012, ಬೆಂಗಳೂರು, ದಿನಾಂಕ: 13.04.2012.**

2012–13ನೇ ಸಾಲಿನ ಆಯವ್ಯಯದಲ್ಲಿ ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಗೆ ಈ ಕೆಳಕಂಡಂತೆ ಅನುದಾನವನ್ನು ಒದಗಿಸಲಾಗಿದೆ.

| | | ಲಕ್ಷ ರೂ.ಗಳಲ್ಲಿ |
|---|---|---|
| ಅ) | 2575–60–265–0–01–059 | 15.00 ರಾಜ್ಯ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯ ಇತರೆ ವೆಚ್ಚಗಳು |
| ಆ) | 2575–60–265–0–02–059 | 135.00 ಶಾಸಕರ ಕ್ಷೇತ್ರ ಪ್ರದೇಶಾಭಿವೃದ್ಧಿ ಯೋಜನೆ ಇತರೆ ವೆಚ್ಚಗಳು |
| ಇ) | 4575–60–800–0–01–132 | 17896.85 ಬಂಡವಾಳ ವೆಚ್ಚ |
| ಈ) | 4575–60–800–0–01–422 | 8590.63 ವಿಶೇಷ ಘಟಕ ಯೋಜನೆ |
| ಉ) | 4575–60–800–0–01–423 | 3362.52 ಗಿರಿಜನ ಉಪಯೋಗಕ್ಕೆ |
| | ಒಟ್ಟು | 30000.00 |

ಒಟ್ಟು ರೂ. 30000.00 ಲಕ್ಷಗಳಿಗೆ ಸದರಿ ಯೋಜನೆಗೆ 2012–13 ಸಾಲಿನಲ್ಲಿ ಸಹ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ರವೀಂದ್ರ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ 1 ಮತ್ತು 2 (ಪ್ರ.),
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**ಪಿ.ಆರ್. ನಂ. 1251**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ** :– 2012–13ನೇ ಸಾಲಿನಲ್ಲಿ ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ ಯೋಜನೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ** :– 1) ಮುಖ್ಯ ಕಾರ್ಯದರ್ಶಿಯವರ ಸುತ್ತೋಲೆ ಸಂಖ್ಯೆ : ಪಿಡಿ 08 ಐಎಂಎಂ 2012, ದಿನಾಂಕ: 02–04–2012.
2) ದಿನಾಂಕ : 13–04–2012 ರ ಸಭೆಯ ನಡವಳಿಗಳು.

**ಪ್ರಸ್ತಾವನೆ:–**

ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಯೋಜನೆಯಡಿ 2012–13ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2515–00–103–0–01–101 ಅಡಿಯಲ್ಲಿ ರೂ. 130.00 ಲಕ್ಷಗಳು, ಲೆಕ್ಕಶೀರ್ಷಿಕೆ 4515–00–800–0–01–132 ಅಡಿಯಲ್ಲಿ ರೂ. 4319.28 ಲಕ್ಷಗಳಂತೆ, ಲೆಕ್ಕಶೀರ್ಷಿಕೆ 4515–00–

800–0–01–422 ಅಡಿಯಲ್ಲಿ ರೂ. 1450 ಲಕ್ಷಗಳಂತೆ ಹಾಗೂ ಲೆಕ್ಕಶೀರ್ಷಿಕೆ 4515–00–800–0–01–423 ಅಡಿಯಲ್ಲಿ ರೂ. 400.72 ಲಕ್ಷಗಳಂತೆ ಒಟ್ಟು ರೂ. 6300.00 ಲಕ್ಷಗಳನ್ನು ಒದಗಿಸಲಾಗಿದೆ.

ಈ ಯೋಜನೆಯಡಿ ಯಾವುದೇ ಮಾರ್ಪಾಟು ಇಲ್ಲದಿರುವುದರಿಂದ ಉಲ್ಲೇಖ–1ರಲ್ಲಿನ ಸುತ್ತೋಲೆಯನ್ವಯ ದಿನಾಂಕ : 13–04–2012ರಂದು ಪ್ರಧಾನ ಕಾರ್ಯದರ್ಶಿ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಈ ಯೋಜನೆಯನ್ನು 2012–13ನೇ ಸಾಲಿನಲ್ಲಿ ಮುಂದುವರೆಸಲು ನಿರ್ಣಯಿಸಲಾಯಿತು.

ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 05 ಹೈಕಮಂ 2012, ಬೆಂಗಳೂರು, ದಿನಾಂಕ: 13.04.2012.**

2012–13ನೇ ಸಾಲಿನ ಆಯವ್ಯಯದಲ್ಲಿ ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಯೋಜನೆಗೆ ಲೆಕ್ಕಶೀರ್ಷಿಕೆ 2515–00–103–0–01–101 ಅಡಿಯಲ್ಲಿ ರೂ. 130.00 ಲಕ್ಷಗಳು, ಲೆಕ್ಕಶೀರ್ಷಿಕೆ 4515–00–800–0–01–132 ಅಡಿಯಲ್ಲಿ ರೂ. 4319.28 ಲಕ್ಷಗಳಂತೆ, ಲೆಕ್ಕಶೀರ್ಷಿಕೆ 4515–00–800–0–01–422 ಅಡಿಯಲ್ಲಿ ರೂ. 1450.00 ಲಕ್ಷಗಳಂತೆ ಹಾಗೂ ಲೆಕ್ಕಶೀರ್ಷಿಕೆ 4515–00–800–0–01–423 ಅಡಿಯಲ್ಲಿ ರೂ. 400.72 ಲಕ್ಷಗಳಂತೆ ಒಟ್ಟು ರೂ. 6300.00 ಲಕ್ಷಗಳ ಯೋಜನೆಗೆ 2012–13ರ ಸಾಲಿಗೆ ಮುಂದುವರಿಸಲು ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ರವೀಂದ್ರ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ 1 ಮತ್ತು 2 (ಪ್ರ.),
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**ಪಿ.ಆರ್. ನಂ. 1250**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ** :– 2012–13ನೇ ಸಾಲಿನಲ್ಲಿ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ ಯೋಜನೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ** :– 1) ಮುಖ್ಯ ಕಾರ್ಯದರ್ಶಿಯವರ ಸುತ್ತೋಲೆ ಸಂಖ್ಯೆ : ಪಿಡಿ 08 ಐಎಂಎಂ 2012, ದಿನಾಂಕ: 02–04–2012.
2) ದಿನಾಂಕ : 13–04–2012 ರಂದು ನಡೆದ ಸಭೆಯ ನಡವಳಿಗಳು.

**ಪ್ರಸ್ತಾವನೆ:–**

ಮಲೆನಾಡು ಪ್ರದೇಶಾಭಿವೃದ್ಧಿ ಯೋಜನೆಯಡಿ 2012–13ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2515–00–103–0–02–101 ಅಡಿಯಲ್ಲಿ ರೂ. 100.00 ಲಕ್ಷಗಳು, ಲೆಕ್ಕಶೀರ್ಷಿಕೆ 4515–00–800–0–03–132 ಅಡಿಯಲ್ಲಿ ರೂ. 2199.99 ಲಕ್ಷಗಳಂತೆ, ಲೆಕ್ಕಶೀರ್ಷಿಕೆ 4515–00–800–0–03–422 ಅಡಿಯಲ್ಲಿ ರೂ. 850.01 ಲಕ್ಷಗಳಂತೆ ಹಾಗೂ ಲೆಕ್ಕಶೀರ್ಷಿಕೆ 4515–00–800–0–03–423 ಅಡಿಯಲ್ಲಿ ರೂ. 250.00 ಲಕ್ಷಗಳಂತೆ ಒಟ್ಟು ರೂ. 3400.00 ಲಕ್ಷಗಳನ್ನು ಒದಗಿಸಲಾಗಿದೆ.

ಈ ಯೋಜನೆಯಡಿ ಯಾವುದೇ ಮಾರ್ಪಾಟು ಇಲ್ಲದಿರುವುದರಿಂದ ಉಲ್ಲೇಖ–1ರಲ್ಲಿನ ಸುತ್ತೋಲೆಯನ್ವಯ ದಿನಾಂಕ : 13–04–2012ರಂದು ಪ್ರಧಾನ ಕಾರ್ಯದರ್ಶಿ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಈ ಯೋಜನೆಯನ್ನು 2012–13ನೇ ಸಾಲಿನಲ್ಲಿ ಮುಂದುವರೆಸಲು ನಿರ್ಣಯಿಸಲಾಯಿತು. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 03 ಮಪ್ರಮಂ 2012, ಬೆಂಗಳೂರು, ದಿನಾಂಕ: 13.04.2012.**

2012–13ನೇ ಸಾಲಿನ ಆಯವ್ಯಯದಲ್ಲಿ ಮಲೆನಾಡು ಪ್ರದೇಶಾಭಿವೃದ್ಧಿ ಯೋಜನೆಗೆ ಲೆಕ್ಕಶೀರ್ಷಿಕೆ 2515–00–103–0–02–101 ಅಡಿಯಲ್ಲಿ ರೂ. 100.00 ಲಕ್ಷಗಳು, ಲೆಕ್ಕಶೀರ್ಷಿಕೆ 4515–00–800–0–03–132 ಅಡಿಯಲ್ಲಿ ರೂ. 2199.99 ಲಕ್ಷಗಳು, ಲೆಕ್ಕಶೀರ್ಷಿಕೆ 4515–00–800–0–03–422 ಅಡಿಯಲ್ಲಿ ರೂ. 850.01 ಲಕ್ಷಗಳು ಹಾಗೂ ಲೆಕ್ಕಶೀರ್ಷಿಕೆ 4515–00–800–0–03–423 ಅಡಿಯಲ್ಲಿ ರೂ. 250.00 ಲಕ್ಷಗಳಂತೆ ಒಟ್ಟು ರೂ. 3400.00 ಲಕ್ಷಗಳ ಯೋಜನೆಗೆ 2012–13ರ ಸಾಲಿಗೆ ಮುಂದುವರಿಸಲು ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ರವೀಂದ್ರ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ 1 ಮತ್ತು 2 (ಪ್ರ.),
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**ಪಿ.ಆರ್. ನಂ. 1249**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ** :– 2012–13ನೇ ಸಾಲಿನಲ್ಲಿ ಹೊಸ ಜಿಲ್ಲೆಯಾದ ಯಾದಗಿರಿ ಜಿಲ್ಲೆಯಲ್ಲಿ ಅಭಿವೃದ್ಧಿ ಕಾಮಗಾರಿಗಳು ಎಂಬ ಯೋಜನೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ** :– 1) ಮುಖ್ಯ ಕಾರ್ಯದರ್ಶಿಯವರ ಸುತ್ತೋಲೆ ಸಂಖ್ಯೆ : ಪಿಡಿ 08 ಐಎಂಎಂ 2012, ದಿನಾಂಕ: 02–04–2012.

2) ದಿನಾಂಕ : 13–04–2012 ರ ಸಭೆಯ ನಡವಳಿಗಳು.

**ಪ್ರಸ್ತಾವನೆ:–**

ಹೊಸ ಜಿಲ್ಲೆಯಾದ ಯಾದಗಿರಿ ಜಿಲ್ಲೆಯಲ್ಲಿ ಅಭಿವೃದ್ಧಿ ಕಾಮಗಾರಿಗಳ ಈ ಯೋಜನೆಗೆ 2012–13ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 4515–00–101–1–03–132 ಅಡಿಯಲ್ಲಿ ರೂ. 1823.00 ಲಕ್ಷಗಳಂತೆ, ಲೆಕ್ಕಶೀರ್ಷಿಕೆ 4515–00–101–1–03–422 ಅಡಿಯಲ್ಲಿ ರೂ. 500.00 ಲಕ್ಷಗಳಂತೆ ಹಾಗೂ ಲೆಕ್ಕಶೀರ್ಷಿಕೆ 4515–00–101–1–03–423 ಅಡಿಯಲ್ಲಿ ರೂ. 177.00 ಲಕ್ಷಗಳಂತೆ ಒಟ್ಟು ರೂ. 2500.00 ಲಕ್ಷಗಳನ್ನು ಒದಗಿಸಲಾಗಿದೆ.

ಈ ಯೋಜನೆಯಡಿ ಯಾವುದೇ ಮಾರ್ಪಾಟು ಇಲ್ಲದಿರುವುದರಿಂದ ಉಲ್ಲೇಖ–1ರಲ್ಲಿನ ಸುತ್ತೋಲೆಯನ್ವಯ ದಿನಾಂಕ : 13–04–2012ರಂದು ಪ್ರಧಾನ ಕಾರ್ಯದರ್ಶಿ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಈ ಯೋಜನೆಯನ್ನು 2012–13ನೇ ಸಾಲಿನಲ್ಲಿ ಮುಂದುವರೆಸಲು ನಿರ್ಣಯಿಸಲಾಯಿತು. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 06 ಹೈಕಮಂ 2012, ಬೆಂಗಳೂರು, ದಿನಾಂಕ: 13.04.2012.**

2012–13ನೇ ಸಾಲಿನ ಆಯವ್ಯಯದಲ್ಲಿ ಹೊಸ ಜಿಲ್ಲೆಯಾದ ಯಾದಗಿರಿ ಜಿಲ್ಲೆಯಲ್ಲಿ ಅಭಿವೃದ್ಧಿ ಕಾಮಗಾರಿಗಳು ಎಂಬ ಯೋಜನೆಗೆ ಲೆಕ್ಕಶೀರ್ಷಿಕೆ 4515–00–101–1–03–132 ಅಡಿಯಲ್ಲಿ ರೂ. 1823.00 ಲಕ್ಷಗಳಂತೆ, ಲೆಕ್ಕಶೀರ್ಷಿಕೆ 4515–00–101–1–03–422 ಅಡಿಯಲ್ಲಿ ರೂ. 500.00 ಲಕ್ಷಗಳಂತೆ ಹಾಗೂ ಲೆಕ್ಕಶೀರ್ಷಿಕೆ 4515–00–101–1–03–423 ಅಡಿಯಲ್ಲಿ ರೂ. 177.00 ಲಕ್ಷಗಳಂತೆ ಒಟ್ಟು ರೂ. 2500.00 ಲಕ್ಷಗಳ ಯೋಜನೆಗೆ 2012–13ರ ಸಾಲಿಗೆ ಮುಂದುವರಿಸಲು ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ರವೀಂದ್ರ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ 1 ಮತ್ತು 2 (ಪ್ರ.),

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**ಪಿ.ಆರ್. ನಂ. 1248**

## HEALTH AND FAMILY WELFARE SECRETARIAT

**Sub :** Approval for extension of Karnataka Health System Development and Reform Project – reg.

**Read :** 1) Govt. Order No. HFW/KHSDRP/Sect/1/2006, dated 30-12-2006.

2) Letter No. 5/4/2001-FB-V, dated 12-12-2011 from the Ministry of Finance, Department of Economic Affairs, GoI, New Delhi.

3) Note No. FD/413/Exp-V/2011, dated 16-03-2011 and approval of the FD obtained on 12-07-2011.

4) World Bank letter dated 29-02-2012.

5) Proceedings of the 29$^{th}$ meeting of the Programme Steering Committee held on 31-03-2012.

**Preamble :**

Government of Karnataka has approved implementation of the Karnataka Health System Development and Reform Project with assistance from the World Bank. The project's main objective is to increase utilization of essential curative and public health services particularly in the underserved areas and among vulnerable groups, and to improve health outcomes in the state. These essential services will have an impact on improving the maternal & child health, reducing maternal & infant mortality rates, fertility ratio and effectively controlling communicable diseases, which have been given priority in the health, related UN Millennium Development Goals.

In the Government Order referred at (1) above, approval was accorded for implementation of the World Bank assisted Karnataka Health System Development and Reform Project, over a period of 5 years with the Project closure date of 31-03-2012, at a cost of US $ 206.48 million (Rs. 897.79 crores) with IDA assistance of US $ 141.83 million along with sanction for the staff strength per Annexure A to the order, formation of the Project Governing Board (PGB) & Programme Steering Committee (PSC) for Project

monitoring & implementation, with the delegation of powers & functions to each of them. The sanctions accorded were effective up to 31-03-2012.

Proposal for Project extension by 3 years up to 31-03-2015 with Additional Financing of US $ 100 million has been recommended by the State Government. Change in the counterpart funding from 90:10 for the original credit to 70:30 for the proposed additional credit suggested by the Government of India (GoI), in the Department of Economic Affairs (DEA) keeping in view the constraints in the headroom for the IDA, was concurred to by the Finance Department on file on 12-07-2011. In the letter read at (2) above, DEA, GoI, communicated its support to the proposal of Government of Karnataka for additional financing of US $ 70 million & extension of the Project period till 31-03-2015 and requested the World Bank to consider the proposal favourably. Pending further preparation, appraisal and approval of the proposal for Project extension by 3 years with additional financing, World Bank in its letter dated 29-02-2012 has extended the credit closing date of the existing IDA Credit 4229 IN by 6 months up to 30-09-2012.

In view of above extension of the currency of the credit up to 30-09-2012, to continue/sustain the initiatives already undertaken/under implementation as also firm up the activities/components under the Additional Financing, approval for extension of the Project from 31-03-2012 to 30-09-2012, as per the existing structure and framework, is required.

On finalization of the activities/components to be undertaken under the Additional Financing, Project will submit proposal for Project extension up to 31-03-2015 with Additional Financing, for consideration & approval of the State Level Steering Committee (SLSC) and Cabinet.

In the meeting proceedings referred to at (5) above, Programme Steering Committee has recommended for approval the proposal for Project extension by 6 months up to 30-09-2012 with the existing staff strength, delegation of administrative & financial powers, to the Chief Secretary & Chairman, PGB. Pending ratification by the Cabinet, proposal for Project extension under IDA Credit 4229 IN by 6 months upto 30-09-2012 has been approved Chief Secretary & Chairman, PGB and Hon'ble Chief Minister.

Hence the following order.

**Govt. Order No. HFW (PR) 7 WBA 2012, Bangalore, dated 17-04-2012.**

In the circumstances explained in the preamble, pending further preparation, appraisal and approval of the proposal for Project extension by 3 years with additional financing by the World Bank, Government are pleased to approve extension of the World Bank assisted Karnataka Health System Development and Reform Project under IDA Credit 4229 IN by 6 months from 31-03-2012 to 30-09-2012 as per the existing organization structure, framework, staff strength and delegation of administrative & financial powers to the PGB, PSC and other Project functionaries.

This order issues with the concurrence of the Finance Dept. vide its approval dated 12-07-2011 and approval of the Hon'ble Chief Minister obtained on file No. HFW (PR) 7 WBA 2012 Bangalore.

By Order and in the name of the Governor of Karnataka,

**K.N. RAMESH**

Deputy Secretary to Govt. (I/c),

KHSDRP

Health and Family welfare Department

**PR No. 1271**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :–** ಜಿಲ್ಲಾ ಆಸ್ಪತ್ರೆ, ಗುಲ್ಬರ್ಗಾ ಈ ಆಸ್ಪತ್ರೆಯನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಆಡಳಿತ ವ್ಯಾಪ್ತಿಗೆ ವರ್ಗಾಯಿಸುವ ಬಗ್ಗೆ.

**ಪ್ರಸ್ತಾವನೆ:–**

ಜಿಲ್ಲಾ ಆಸ್ಪತ್ರೆ, ಗುಲ್ಬರ್ಗಾ ಈ ಆಸ್ಪತ್ರೆಯು ಪ್ರಸ್ತುತ ವೈದ್ಯಕೀಯ ಶಿಕ್ಷಣ ಇಲಾಖೆಯ ಆಡಳಿತ ವ್ಯಾಪ್ತಿಯಲ್ಲಿದ್ದು, ಇದು ದ್ವಿತೀಯ ಹಂತದ ಆರೋಗ್ಯ ಸೇವೆಯನ್ನು ನೀಡುತ್ತಿರುವ ಆಸ್ಪತ್ರೆಯಾಗಿರುವುದರಿಂದ, ಈ ಆಸ್ಪತ್ರೆಯ ನಿರ್ವಹಣೆಯನ್ನು ಆಡಳಿತಾತ್ಮಕ ಹಾಗೂ ಸಾರ್ವಜನಿಕ

ಹಿತದೃಷ್ಟಿಯಿಂದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅಧಿಕಾರದ ವ್ಯಾಪ್ತಿಗೊಳಪಡಿಸುವುದು ಸೂಕ್ತವೆಂದು ಸರ್ಕಾರವು ಮನಗಂಡು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 337 ಎಂಎಸ್‌ಎಫ್ 2011, ಬೆಂಗಳೂರು, ದಿನಾಂಕ: 30-04-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ, ಸರ್ಕಾರವು ಜಿಲ್ಲಾ ಆಸ್ಪತ್ರೆ, ಗುಲ್ಬರ್ಗಾ ಈ ಆಸ್ಪತ್ರೆಯನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಡಳಿತಾತ್ಮಕ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಆಡಳಿತ ವ್ಯಾಪ್ತಿಗೆ ವರ್ಗಾಯಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ. ಸಾಯಿಬಾಬಾ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ವೈದ್ಯಕೀಯ ಶಿಕ್ಷಣ)

**ಪಿ.ಆರ್. ನಂ. 1318**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ** :- ಮಾನ್ಯ ಮುಖ್ಯಮಂತ್ರಿಗಳ ಸಚಿವಾಲಯದಲ್ಲಿ ಗುತ್ತಿಗೆ ಆಧಾರದ ಮೇರೆಗೆ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ/ಸಿಬ್ಬಂದಿ ವರ್ಗದವರಿಗೆ ಗೌರವ ಧನವನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ** :- 1) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 69 ಸಅಸೇ 2009, ದಿನಾಂಕ : 21-06-2010.

2) ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ : ಮುಮಕಾ 490/136:2011, ದಿನಾಂಕ : 03-02-2011 ಮತ್ತು 18-08-2011.

**ಪ್ರಸ್ತಾವನೆ:-**

ಮೇಲೆ ಓದಲಾದ (1)ರ ಆದೇಶದಲ್ಲಿ ಮಾನ್ಯ ಮುಖ್ಯಮಂತ್ರಿಗಳ ಸಚಿವಾಲಯದಲ್ಲಿ ಗುತ್ತಿಗೆ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ/ನೌಕರರಿಗೆ ವಿಧಾನ ಮಂಡಲದ ಅಧಿವೇಶನ ನಡೆಯುವ ಸಮಯದಲ್ಲಿ ದಿನವೊಂದಕ್ಕೆ ರೂ. 125/-ಗಳ ಗೌರವಧನವನ್ನು ದಿನಾಂಕ : 4-6-2008 ರಿಂದ ಜಾರಿಗೆ ಬರುವಂತೆ ಹಾಗೂ ವಿಶೇಷ ಪ್ರಕರಣವೆಂದು ಪರಿಗಣಿಸಿ, ಮತ್ತು ಇದನ್ನು ಯಾವುದೇ ಕಾರಣಕ್ಕೂ ಪೂರ್ವ ನಿದರ್ಶನವೆಂದು ಪರಿಗಣಿಸತಕ್ಕದ್ದಲ್ಲ ಎಂಬ ಷರತ್ತಿನೊಂದಿಗೆ ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ (2)ರ ಟಿಪ್ಪಣಿಯಲ್ಲಿ ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ಗುತ್ತಿಗೆ ಆಧಾರದ ಮೇಲೆ ವಿವಿಧ ವೃಂದದ ಹುದ್ದೆಗಳಲ್ಲಿ ಗ್ರೂಪ್-ಬಿ, ಸಿ ಮತ್ತು ಡಿ ವೃಂದದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳಿಗೆ ವಿಧಾನ ಮಂಡಲದ ಅಧಿವೇಶನದ ಸಮಯದಲ್ಲಿ ಪ್ರತಿ ದಿವಸಕ್ಕೆ ರೂ. 125/- ಗಳ ಗೌರವ ಧನವನ್ನು ಪಾವತಿ ಮಾಡಲಾಗುತ್ತಿದೆ. ಖಾಯಂ ನೌಕರರುಗಳಿಗೆ ರೂ. 500/-ಗಳ ಗೌರವ ಧನವನ್ನು ಪಾವತಿ ಮಾಡಲಾಗುತ್ತಿದ್ದು, ಖಾಯಂ ನೌಕರರಿಗೆ ಪಾವತಿಸಿದಂತೆ ಗುತ್ತಿಗೆ ನೌಕರರುಗಳಿಗೂ ಸಹ ಅಧಿವೇಶನದ ಸಮಯದಲ್ಲಿ ಪ್ರತಿ ದಿವಸ ರೂ. 500/-ಗಳ ಗೌರವಧನವನ್ನು ಮಂಜೂರು ಮಾಡುವಂತೆ ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರು ಕೋರಿರುತ್ತಾರೆ.

ಅದರಂತೆ, ಸರ್ಕಾರವು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 132 ಸಅಸೇ 2011, ಬೆಂಗಳೂರು, ದಿನಾಂಕ: 07-05-2012.**

ಪ್ರಸ್ತಾವನೆಯಲ್ಲಿ ತಿಳಿಸಿರುವ ವಿವರಗಳ ಹಿನ್ನೆಲೆಯಲ್ಲಿ ಮಾನ್ಯ ಮುಖ್ಯಮಂತ್ರಿಗಳ ಸಚಿವಾಲಯದಲ್ಲಿ ಗುತ್ತಿಗೆ ಆಧಾರದ ಮೇಲೆ ವಿವಿಧ ವೃಂದದ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ/ನೌಕರರುಗಳಿಗೆ ಕರ್ನಾಟಕ ವಿಧಾನ ಮಂಡಲದ ಅಧಿವೇಶನ ನಡೆಯುವ ಅವಧಿಗೆ ಮಾತ್ರ ಅನ್ವಯವಾಗುವಂತೆ ಗೌರವ ಧನವನ್ನು ದಿನಾಂಕ : 27-10-2010 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ದಿನವೊಂದಕ್ಕೆ ರೂ. 250/- (ಎರಡು ನೂರ ಐವತ್ತು ರೂಪಾಯಿಗಳು ಮಾತ್ರ) ಗಳಿಗೆ ಹೆಚ್ಚಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 28 ಎಸ್‌ಆರ್‌ಪಿ 2011, ದಿನಾಂಕ : 26-04-2012ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ. ಲಕ್ಷ್ಮೀನಾರಾಯಣರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3)

ಪಿ.ಆರ್. ನಂ. 1321

## ಶಿಕ್ಷಣ ಸಚಿವಾಲಯ

**ವಿಷಯ** :– ಕರ್ನಾಟಕ ರಾಜ್ಯದಲ್ಲಿನ ಅನುದಾನಿತ ಇಂಜಿನಿಯರಿಂಗ್ ಕಾಲೇಜುಗಳಿಗೆ ಸಂಬಂಧಿಸಿದಂತೆ ಅನುದಾನ ಸಂಹಿತೆಯನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ** :– 1) ಸರ್ಕಾರದ ಆದೇಶ ಸಂಖ್ಯೆ : ಇಡಿ 130 ಟಿಇಸಿ 2011, ದಿನಾಂಕ: 04–01–2012.

2) ಕರ್ನಾಟಕ ರಾಜ್ಯದಲ್ಲಿನ ಖಾಸಗಿ ಅನುದಾನಿತ ಇಂಜಿನಿಯರಿಂಗ್ ಕಾಲೇಜುಗಳ ಆಡಳಿತ ಮಂಡಳಿಗಳ ಸಂಘ, ಬೆಂಗಳೂರು ಇವರ ಮನವಿ ದಿನಾಂಕ : 12–01–2012.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿನ 10 ಖಾಸಗಿ ಅನುದಾನಿತ ಇಂಜಿನಿಯರಿಂಗ್ ಕಾಲೇಜುಗಳಲ್ಲಿನ ಅನುದಾನಿತ ಕೋರ್ಸುಗಳಿಗೆ ಕೆಲವು ಷರತ್ತುಗಳಿಗೆ ಒಳಪಟ್ಟು ಆಡಳಿತ ಮಂಡಳಿಯವರು ಪಡೆಯುತ್ತಿರುವ ಶೇ 100 ರಷ್ಟು ಬೋಧನಾ ಶುಲ್ಕವನ್ನು ಆಡಳಿತ ಮಂಡಳಿಯೇ ಉಳಿಸಿಕೊಳ್ಳಲು ಸರ್ಕಾರವು ಅನುಮತಿ ನೀಡಿ ಈ ಆದೇಶವು ದಿನಾಂಕ : 01–04–2012 ರಿಂದ ಮುಂದಿನ ಆದೇಶದವರೆಗೆ ಜಾರಿಗೆ ಬರುತ್ತದೆ ಎಂದು ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿನ ಮನವಿಯಲ್ಲಿ ರಾಜ್ಯ ಸರ್ಕಾರವು ಸರ್ಕಾರಿ/ಅನುದಾನಿತ ಇಂಜಿನಿಯರಿಂಗ್ ಕಾಲೇಜುಗಳಲ್ಲಿನ ಬೋಧಕ ಸಿಬ್ಬಂದಿ ವರ್ಗದವರಿಗೆ ಪರಿಷ್ಕೃತ ಎಐಸಿಟಿಇ ವೇತನ ಶ್ರೇಣಿಗಳನ್ನು ದಿನಾಂಕ : 01–04–2011 ರಿಂದ ಜಾರಿಗೊಳಿಸಿರುವುದರಿಂದ 2011–12ನೇ ಸಾಲಿನಲ್ಲಿ ಸಿಬ್ಬಂದಿ ವರ್ಗದವರ ವೇತನ ಪಾವತಿಗೆ ಆಡಳಿತ ಮಂಡಳಿಯ ವತಿಯಿಂದ ಶೇ. 15ರಷ್ಟು ವೇತನವನ್ನು ಮತ್ತು ಇನ್ನಿತರೆ ರೆಕರಿಂಗ್ ವೆಚ್ಚಗಳನ್ನು ಭರಿಸಲು ಆಡಳಿತ ಮಂಡಳಿಯವರಿಂದ ಸಾಧ್ಯವಾಗುವುದಿಲ್ಲವೆಂದೂ, ಆದುದರಿಂದ ಈಗಾಗಲೇ ದಿನಾಂಕ : 01–01–2012 ರಂದು ಹೊರಡಿಸಿರುವ ಆದೇಶವನ್ನು ಪರಿಷ್ಕರಿಸಿ ದಿನಾಂಕ : 01–04–2011 ರಿಂದಲೇ ಜಾರಿಗೆ ಬರುವಂತೆ ಶೇ. 100 ರಷ್ಟು ಬೋಧನಾ ಶುಲ್ಕವನ್ನು ಆಡಳಿತ ಮಂಡಳಿಗಳೇ ಉಳಿಸಿಕೊಳ್ಳಲು ಅನುಮತಿ ನೀಡುವಂತೆ ಸರ್ಕಾರಕ್ಕೆ ಬೇಡಿಕೆಯನ್ನು ಸಲ್ಲಿಸಿರುತ್ತದೆ. ಈ ಬೇಡಿಕೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 130 ಟಿಇಸಿ 2011, ಬೆಂಗಳೂರು, ದಿನಾಂಕ: 21.04.2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ ಇಡಿ 130 ಟಿಇಸಿ 2011, ದಿನಾಂಕ : 04–01–2012 ರಲ್ಲಿ ಕರ್ನಾಟಕ ರಾಜ್ಯದಲ್ಲಿನ 10 ಖಾಸಗಿ ಅನುದಾನಿತ ಇಂಜಿನಿಯರಿಂಗ್ ಕಾಲೇಜುಗಳಲ್ಲಿನ ಅನುದಾನಿತ ಕೋರ್ಸುಗಳಿಗೆ ಆಡಳಿತ ಮಂಡಳಿಯವರು ಪಡೆಯುತ್ತಿರುವ ಶೇ. 100ರಷ್ಟು ಬೋಧನಾ ಶುಲ್ಕವನ್ನು ಆಡಳಿತ ಮಂಡಳಿಯೇ ಉಳಿಸಿಕೊಳ್ಳಲು ಅನುಮತಿ ನೀಡಿ ಈ ಆದೇಶವು ದಿನಾಂಕ : 01–04–2012 ರಿಂದ ಜಾರಿಗೆ ಬರುವಂತೆ ಎಂದು ನಮೂದಿಸಿರುವುದನ್ನು ಮಾರ್ಪಡಿಸಿ ಸದರಿ ಆದೇಶವು ದಿನಾಂಕ : 01–04–2011 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಜಾರಿಯಲ್ಲಿರತಕ್ಕದ್ದು ಎಂದು ಆದೇಶಿಸಿದೆ ಹಾಗೂ ದಿನಾಂಕ : 04–01–2012ರ ಆದೇಶದಲ್ಲಿನ ಕ್ರಮ ಸಂಖ್ಯೆ (2) ರಿಂದ (5) ರಲ್ಲಿನ ಷರತ್ತುಗಳು ಯಥಾವತ್ತಾಗಿ ಅನ್ವಯಿಸುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಎನ್. ಜಗದೀಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

**ಪಿ.ಆರ್. ನಂ. 1320**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ** :– ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ 2012–2013ನೇ ಸಾಲಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** :– ಪತ್ರ ಸಂಖ್ಯೆ : ಹೈಕಪ್ರಮಂ/ಹನಿ/ಲೆಕ್ಕ–1/2012–13/46, ದಿನಾಂಕ : 17–04–2012.

**ಪ್ರಸ್ತಾವನೆ:–**

2012–13ನೇ ಸಾಲಿನಲ್ಲಿ ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ ಲೆಕ್ಕಶೀರ್ಷಿಕೆ "2515–00–103–0–01–101 ಅಡಿಯಲ್ಲಿ ರೂ. 130.00 ಲಕ್ಷಗಳನ್ನು ಹಾಗೂ 4515–0–800–0–01–132 ಅಡಿಯಲ್ಲಿ ರೂ. 4319.28 ಲಕ್ಷಗಳಂತೆ, ಲೆಕ್ಕಶೀರ್ಷಿಕೆ 4515–00–800–0–01–422 ಅಡಿಯಲ್ಲಿ ರೂ. 1450.00 ಲಕ್ಷಗಳಂತೆ ಹಾಗೂ ಲೆಕ್ಕಶೀರ್ಷಿಕೆ 4515–00–800–0–01–423 ಅಡಿಯಲ್ಲಿ ರೂ. 400.72 ಲಕ್ಷಗಳಂತೆ ಒಟ್ಟು ರೂ. 6300.00 ಲಕ್ಷಗಳನ್ನು ಒದಗಿಸಲಾಗಿದೆ. ಉಲ್ಲೇಖದಲ್ಲಿನ ಪತ್ರದಲ್ಲಿ ಕಾರ್ಯದರ್ಶಿ ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ ಇವರು ಅನುದಾನ ಬಿಡುಗಡೆ ಮಾಡಲು ಕೋರಿರುವ ಹಿನ್ನೆಲೆಯಲ್ಲಿ ಮಂಡಳಿಗೆ ರೂ. 1575.00 ಲಕ್ಷಗಳ ಅನುದಾನ ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 07 ಹೈಕಮಂ 2012, ಬೆಂಗಳೂರು, ದಿನಾಂಕ: 28.04.2012.**

2012–13ನೇ ಸಾಲಿನಲ್ಲಿ ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ ಆಡಳಿತ ವೆಚ್ಚಗಳಿಗಾಗಿ ಲೆಕ್ಕಶೀರ್ಷಿಕೆ "2515–00–800–0–01–101 (ಸಹಾಯಾನುದಾನ)" ಅಡಿಯಲ್ಲಿ ರೂ. 32.50 ಲಕ್ಷಗಳನ್ನು (ಮುವತ್ತೆರಡು ಲಕ್ಷ ಐವತ್ತು ಸಾವಿರ ಮಾತ್ರ) ಬಂಡವಾಳ ವೆಚ್ಚಗಳಿಗಾಗಿ ಲೆಕ್ಕಶೀರ್ಷಿಕೆ 4515–00–800–0–01–132 ಅಡಿ ರೂ. 1079.82 ಲಕ್ಷಗಳನ್ನು (ಹತ್ತು ಕೋಟಿ ಎಪ್ಪತ್ತೊಂಭತ್ತು ಲಕ್ಷ ಎಂಭತ್ತೆರಡು ಸಾವಿರಗಳು ಮಾತ್ರ) ವಿಶೇಷ ಘಟಕ ಯೋಜನೆಯಡಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಲೆಕ್ಕಶೀರ್ಷಿಕೆ 4515–00–800–0–01–422 ಅಡಿಯಲ್ಲಿ ರೂ. 362.50 ಲಕ್ಷಗಳನ್ನು (ಮೂರು ಕೋಟಿ ಅರವತ್ತೆರಡು ಲಕ್ಷ ಐವತ್ತು ಸಾವಿರಗಳು ಮಾತ್ರ) ಹಾಗೂ ಗಿರಿಜನ ಉಪಯೋಜನೆಯಡಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಲೆಕ್ಕಶೀರ್ಷಿಕೆ 4515–00–800–0–01–423 ಅಡಿಯಲ್ಲಿ ರೂ. 100.18 ಲಕ್ಷಗಳು (ಒಂದು ಕೋಟಿ ಹದಿನೆಂಟು ಸಾವಿರ ರೂ.ಗಳು ಮಾತ್ರ) ಮೊದಲನೆಯ ಕಂತಾಗಿ ಬಿಡುಗಡೆ ಮಾಡಲಾಗಿದೆ.

2) ಬಿಡುಗಡೆಯಾದ ಮೊತ್ತವನ್ನು ಮಂಡಳಿಯ ವೈಯಕ್ತಿಕ ಖಾತೆಯಲ್ಲಿ ಮೊದಲು ಇಟ್ಟು ನಂತರ ಕಾರ್ಯಕ್ರಮದ ಅನುಗುಣವಾಗಿ ಖರ್ಚು ಮಾಡತಕ್ಕದ್ದು. ನಿಯಮಾನುಸಾರ ಹಣ ಬಳಕೆ ದೃಢೀಕರಣ ಪತ್ರವನ್ನು 2012–13ರ ಸಾಲಿನಲ್ಲಿ ಮಂಡಳಿಯ ಕಾರ್ಯದರ್ಶಿಯವರು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ : ಆಇ 537 Exp–6/2011, ದಿನಾಂಕ : 29–02–2012ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಉಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ 1 ಮತ್ತು 2,

**ಪಿ.ಆರ್. ನಂ. 1322** ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ : ಯೋಇ 07/ಹೈಕಮಂ 2012, ಬೆಂಗಳೂರು, ದಿನಾಂಕ : 04–05–2012**

ಸರ್ಕಾರದ ಆದೇಶ ಸಂಖ್ಯೆ : ಯೋಇ 07 ಹೈಕಮಂ 2012, ದಿನಾಂಕ : 28–04–2012 ರಲ್ಲಿ ಲೆಕ್ಕಶೀರ್ಷಿಕೆ 2515–00–800–0–01–101 ಎಂದು ತಪ್ಪಾಗಿ ಬೆರಳಚ್ಚಿಸಲಾಗಿ ಇದರ ಬದಲಾಗಿ ಲೆಕ್ಕಶೀರ್ಷಿಕೆ 2515–00–103–0–01–101 ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಉಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ 1 ಮತ್ತು 2,

**ಪಿ.ಆರ್. ನಂ. 1323** ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

## ಅಲ್ಪಸಂಖ್ಯಾತರ ಕಲ್ಯಾಣ, ಹಜ್ ಮತ್ತು ವಕ್ಫ್ ಸಚಿವಾಲಯ

**ವಿಷಯ** :– 2012–13ನೇ ಸಾಲಿನ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮಕ್ಕೆ ಒದಗಿಸಿದ ಆಯವ್ಯಯದಲ್ಲಿ ಮೊದಲನೇ ಕಂತಾಗಿ ಶೇ. 25 ರಷ್ಟು ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** :– 1) ಸರ್ಕಾರದ ಆದೇಶ ಸಂಖ್ಯೆ : ಅಸಂಕಿ 200, ಎಂಡಿಎಸ್ 2012, ದಿನಾಂಕ: 11–04–2012.

2) ವ್ಯವಸ್ಥಾಪಕ ನಿರ್ದೇಶಕರು, ಕೆಎಂಡಿಸಿ ಇವರ ಪತ್ರ ಸಂಖ್ಯೆ : ಕಅನಿ/654(7)/2012–13/113, ದಿನಾಂಕ : 17–04–2012.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಅಲ್ಪಸಂಖ್ಯಾತರ ಕಲ್ಯಾಣ ಹಜ್ ಮತ್ತು ವಕ್ಫ್ ಇಲಾಖೆಯ ಪ್ರಸ್ತುತ ಜೋಜನಾ ಕಾರ್ಯಕ್ರಮಗಳನ್ನು 2012–13ನೇ ಆರ್ಥಿಕ ಸಾಲಿನಲ್ಲಿ ಮುಂದುವರಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ವ್ಯವಸ್ಥಾಪಕರು, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ ಇವರು ಪ್ರಸ್ತಾವನೆಯನ್ನು ಸಲ್ಲಿಸಿ, ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮಕ್ಕೆ ವಿವಿಧ ಕಾರ್ಯಕ್ರಮಗಳನ್ನು 2012–13ನೇ ಸಾಲಿನಲ್ಲಿ ಅನುಷ್ಠಾನಗೊಳಿಸಲು ಆಯವ್ಯಯದಲ್ಲಿ ಒದಗಿಸಲಾದ ಅನುದಾನ ರೂ. 10000.00 (ರೂ. ಹತ್ತು ಸಾವಿರ ಲಕ್ಷಗಳು) ಲಕ್ಷಗಳ ಪೈಕಿ ಮೊದಲನೇ ಕಂತಾಗಿ ರೂ. 2500.00 ಲಕ್ಷಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅಸಂಕಇ 17, ಎಂಡಿಸಿ 2012, ಬೆಂಗಳೂರು, ದಿನಾಂಕ: 05.05.2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ, 2011–13ನೇ ಸಾಲಿನಲ್ಲಿ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮಕ್ಕೆ ಈ ಕೆಳಕಂಡ ಕಾರ್ಯಕ್ರಮಗಳಿಗೆ ಮೊದಲನೇ ಕಂತಿನ ಅನುದಾನ ಬಿಡುಗಡೆಗೊಳಿಸಿ ಆದೇಶಿಸಲಾಗಿದೆ.

| ಕ್ರ.ಸಂ. | ಕಾರ್ಯಕ್ರಮಗಳ ವಿವರ ಮತ್ತು ಲೆಕ್ಕಶೀರ್ಷಿಕೆ | 2012–13ನೇ ಸಾಲಿನ ಆಯವ್ಯಯ ಅನುದಾನ | ಶೇ.25ರಷ್ಟು ಬಿಡುಗಡೆ ಮಾಡಲಾದ ಅನುದಾನದ ಮೊದಲೇ ಕಂತು |
|---|---|---|---|
| 1. | ಸಹಾಯಧನ 2225–03–800–0–04–106 | 200.00 | 50.00 |
| 2. | ಗಂಗಾ ಕಲ್ಯಾಣ ಯೋಜನೆ 2225–03–800–0–04–059 | 1900.00 | 475.00 |
| 3. | ಶ್ರಮಶಕ್ತಿ ಯೋಜನೆ 2225–03–277–2–26–101 | 1800.00 | 450.00 |
| 4. | ಮೈಕ್ರೋ ಸಹಾಯಧನ 2225–03–190–0–02–106 | 1200.00 | 300.00 |
| | ಒಟ್ಟು | 5100.00 | 1275.00 |

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ : ಸಕಕಾ 134 ಆಂಆಸ 2012, ದಿನಾಂಕ : 30–04–2012ರನ್ವಯ ಹಾಗೂ ಸರ್ಕಾರಿ ಆದೇಶ ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 4 ಟಿಎಫ್‌ಪಿ 2012, ದಿನಾಂಕ : 27–04–2012ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ನಾಗರತ್ನ**

ಸರ್ಕಾರದ ಉಪ ಕಾರ್ಯದರ್ಶಿ,

**ಪಿ.ಆರ್. ನಂ. 1329** ಅಲ್ಪಸಂಖ್ಯಾತರ ಕಲ್ಯಾಣ, ಹಜ್ ಮತ್ತು ವಕ್ಫ್ ಇಲಾಖೆ.

## HOME SECRETARIAT

**Sub :** Constitution of Evaluation Committee consisting of three Experts for stock taking and evaluation as well as verification of several components of Police IT – Reg.

**Read :** 1) Letter No. 119/ADGP/PCW/2012, dated : 24th March 2012 of Additional Director General of Police, Police Computer Wing, Bangalore.

2) Letter dated 14th March 2012 from the Principal Secretary to Government, DPAR (E-governance).

3) Letter No. KSEDC/HR/PS-HD/2012-13, dated 10th April, 2012 from the Manager (HR), Karnataka State Electronics Development Corporation Limited, Bangalore.

**Preamble :**

(1) The Additional Director General of Police, PCW, Bangalore vide his letter referred to at (1) above, while submitting the history of Police IT, has stated that final payments to WIPRO to the tune of Rs. 1.96 crores is pending even though the works as assigned to WIPRO have been completed. Hence he has requested for sanction of the same for making payment to WIPRO.

(2) On examination of the proposal, the Government have decided to take stock evaluation and technically verify several components of Police IT that have been pending for sometime. In this connection it was felt that there is need to constitute an Expert Committee consisting of persons having expertise in the procurement of electronic equipments, their use and appropriate hardware configuration keeping in view the software requirements as per the DPR of original Police I.T. It was further decided that the Expert Committee must assess the entire implementation of Police IT from inception to date vis-à-vis its objectives, original time schedules, cost over runs in comparison to the estimate, improper supervision and all other relevant matters and also to examine as to whether proper procurement procedure under KTPP Act, 1999 and Rules have been followed in the implementation of Police IT from inception to date so as to enable the Government to take a decision on the payment to WIPRO.

(3) In the letter read at (2) above, the Principal Secretary to Government, DPAR E-governance has recommended outsourcing the services of the following 3 experts through KEONICS and making payment directly to KEONICS.

a) Mr. Tarak Dhurjati, Grand Thomton

b) Mr. Saurabh Bhattacharya, Grand Thorton

c) Mr. Sabyasachi Das, SeMT.

4) In the letter read at (3) above the KEONICS has accepted the proposal to provide Evaluation Committee consisting of three Experts as per Home Department requirement, subject to payment of remuneration for the Experts with the Service tax at 12.36% and 10% Service charges. It is further stated that the deployment will be made as per the Terms and Conditions of KEONICS. After examining the proposal, the following orders are issued.

**Govt. Order No. HD 22 EFS 2011, Bangalore, dated 08-05-2012.**

In the circumstances explained in the preamble, sanction of the Government is hereby accorded to constitute an Evaluation Committee comprising of the following Experts to assess the entire implementation of Police IT from inception to date vis-à-vis its objectives, original time schedules, cost overruns in comparison to the estimate, improper supervision and all other relevant matters :-

1) Mr. Tarak Dhurjati, Grand Thomton

2) Mr. Saurabh Bhattacharya, Grand Thorton

3) Mr. Sabyasachi Das, SeMT.

The committee shall look into the following issues and shall give its findings within a period of one month positively:-

1. to assess the entire implementation of Police IT from inception to date vis-à-vis its objectives, original time schedules, cost overruns in comparison to the estimate, improper supervision and all other relevant matters.
2. to fix responsibility on the officers responsible for delays.
3. to fix responsibility on the officers who have entrusted additional works without proper prior approval of Committee headed by Chief Secretary or the Government.
4. to fix responsibility on officers who have issued orders without following the provision of the KTPP Act.
5. to check the technical relevance of the additional works, additional purchases and the correctness of the procedure followed for the same under KTPP Act and Rules.

The deployment of the said committee shall be as per the terms and conditions of KEONICS.

Remuneration payable to the Experts will be finalised by the Department of Personnel and Administration Reforms, E-Governance and shall be met out of the DPAR, E-Governance Head of Account.

By Order and in the name of the Governor of Karnataka,

**B. RAJAMMA**

Under Secretary to Government

Home Department (Police Expr.)

**PR No. 1330**

## ಕನ್ನಡ ಹಾಗೂ ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

**ವಿಷಯ** :– ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಹಾಗೂ ಪರಂಪರೆ ಇಲಾಖೆಗೆ ನಗರ ವಿನ್ಯಾಸಕರು ಮತ್ತು ವಾಸ್ತು ಶಿಲ್ಪ ಸಂರಕ್ಷಕರ ಹುದ್ದೆಗಳನ್ನು ಮುಂದುವರಿಸುವ ಕುರಿತು.

**ಓದಲಾಗಿದೆ** :– 1) ಸರ್ಕಾರದ ಆದೇಶ ಸಂಖ್ಯೆ : ಸಂಕಇ 95, ಕೆಎಂಯು 2004, ದಿನಾಂಕ : 26–08–2004.

2) ಸರ್ಕಾರಿ ಆದೇಶ ಸಂಖ್ಯೆ : ಸಂಕಇ 219, ಕೆಎಂಯು 2005, ದಿನಾಂಕ : 29–10–2005.

3) ಸರ್ಕಾರಿ ಆದೇಶ ಸಂಖ್ಯೆ : ಸಂಕಇ 31, ಕೆಎಂಯು 2006, ದಿನಾಂಕ : 19–01–2007.

4) ಸರ್ಕಾರಿ ಆದೇಶ ಸಂಖ್ಯೆ : ಸಂಕಇ 228, ಕೆಎಂಯು 2010, ದಿನಾಂಕ : 15–12–2010.

5) ಸರ್ಕಾರಿ ಆದೇಶ ಸಂಖ್ಯೆ : ಕಸಂವಾಪ್ರ 228, ಕೆಎಂಯು 2010, ದಿನಾಂಕ : 26–07–2011.

6) ಪತ್ರ ಸಂಖ್ಯೆ ಆಪ್ರಾಸಂಪ/ವಾ.ಸಂ. & ನ.ವಿ.ತ/2011–12/280, ದಿನಾಂಕ : 13–03–2012.

**ಪ್ರಸ್ತಾವನೆ:–**

ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಗೆ ನಗರ ವಿನ್ಯಾಸಕರು ಮತ್ತು ವಾಸ್ತುಶಿಲ್ಪ ಸಂರಕ್ಷಕರ ಹುದ್ದೆಗಾಗಿ ತಲಾ ಒಬ್ಬೊಬ್ಬರು ಅಭ್ಯರ್ಥಿಗಳನ್ನು ಬಾಹ್ಯ ಮೂಲದಿಂದ ಮಾಸಿಕ ಸಂಚಿತ ವೇತನದ ಆಧಾರದ ಮೇಲೆ ನೇಮಕ ಮಾಡಿಕೊಳ್ಳಲು ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಅನುಮತಿ ನೀಡಲಾಗಿತ್ತು. ಈ ಎರಡೂ ಹುದ್ದೆಗಳನ್ನು ಆಯ್ಕೆ ಮಾಡಿ ಭರ್ತಿ ಮಾಡಿಕೊಳ್ಳಲು ಮೇಲೆ (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸಮಿತಿಯನ್ನು ರಚಿಸಲಾಗಿತ್ತು. ಆ ಮೇರೆಗೆ ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ನಗರ ವಿನ್ಯಾಸಕರು ಮತ್ತು ವಾಸ್ತು ಶಿಲ್ಪ ಸಂರಕ್ಷಕರ ಹುದ್ದೆಗೆ ಮಾಸಿಕ ಸಂಚಿತ ವೇತನ ರೂ. 16,000/– ಆಧಾರದ ಮೇಲೆ ಬಾಹ್ಯ ಮೂಲದ ಮೂಲಕ ಶ್ರೀ ಹೆಚ್.ಡಿ. ನಾಗೇಶ್, ಮೈಸೂರು ಮತ್ತು ಶ್ರೀ ಜಿ.ಎಸ್.ವಿ. ಸೂರ್ಯನಾರಾಯಣ ಮೂರ್ತಿ, ಹೈದರಾಬಾದ್ ಇವರುಗಳನ್ನು ಷರತ್ತು ನಿಬಂಧನೆಗೊಳಪಟ್ಟು ಮೇಲೆ ಓದಲಾದ (3)ರ ಸರ್ಕಾರಿ ಆದೇಶದಲ್ಲಿ ನೇಮಕಾತಿ ಮಾಡಿಕೊಳ್ಳಲಾಗಿತ್ತು. ತದನಂತರ ಸದರಿ ಹುದ್ದೆಗಳನ್ನು ದಿನಾಂಕ : 19–01–2008 ರಿಂದ 19–01–2011ರವರೆಗೆ ಮೂರು ವರ್ಷಗಳ ಅವಧಿಗೆ ಮೇಲೆ ಓದಲಾದ (4)ರ ಸರ್ಕಾರದ ಆದೇಶದಲ್ಲಿ ಮುಂದುವರೆಸಲಾಗಿತ್ತು. ಮೇಲೆ ಓದಲಾದ (5)ರ ಸರ್ಕಾರದ ಆದೇಶದಲ್ಲಿ ದಿನಾಂಕ : 19–01–2011 ರಿಂದ ಒಂದು ವರ್ಷದ ಅವಧಿಗೆ ಅಂದರೆ ದಿನಾಂಕ : 18–01–2012ರ ವರೆಗೂ ಹುದ್ದೆಗಳ ಮಾಸಿಕ ಸಂಚಿತ ವೇತನವನ್ನು ರೂ. 16000/– ರಿಂದ ರೂ. 20000/– ಗಳಿಗೆ ಹೆಚ್ಚಿಸಲಾಗಿತ್ತು.

ನಗರ ವಿನ್ಯಾಸಕರು ಮತ್ತು ವಾಸ್ತುಶಿಲ್ಪ ಸಂರಕ್ಷಕರ ಹುದ್ದೆಗಳಿಗೆ ಬಾಹ್ಯಮೂಲದಿಂದ ಸೂಕ್ತ ಅಭ್ಯರ್ಥಿಗಳನ್ನು ನೇಮಕಾತಿ ಮಾಡಿಕೊಳ್ಳಲು ಮತ್ತು ಅವರುಗಳ ಮಾಸಿಕ ಸಂಚಿತ ವೇತನವನ್ನು ರೂ. 20,000/– ರಿಂದ ರೂ. 30,000/– ಕ್ಕೆ ಹೆಚ್ಚಿಸಲು ಹಾಗೂ ದಿನಾಂಕ : 18–01–2012 ರಿಂದ 2 ವರ್ಷ ಅವಧಿಗೆ ಮುಂದುವರಿಸಲು ಮೇಲೆ ಓದಲಾದ (6)ರ ಪತ್ರದಲ್ಲಿ ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಇವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾ 88, ಕೆಎಂಯು 2012, ಬೆಂಗಳೂರು, ದಿನಾಂಕ: 30–04–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಗೆ ಸೃಜಿಸಲಾಗಿರುವ ನಗರ ವಿನ್ಯಾಸಕರು ಮತ್ತು ವಾಸ್ತುಶಿಲ್ಪ ಸಂರಕ್ಷಕರ ತಲಾ ಒಂದೊಂದು ಹುದ್ದೆಯನ್ನು ದಿನಾಂಕ : 19–01–2012 ರಿಂದ 31–03–2014ರ ವರೆಗೆ ಮುಂದುವರೆಸಿದೆ. ಈ ಹುದ್ದೆಗೆ ಅಭ್ಯರ್ಥಿಗಳನ್ನು ಬಾಹ್ಯಮೂಲದಿಂದ ನೇಮಕಾತಿ ಮಾಡಲು ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 2, ಟಿಎಫ್‌ಪಿ 2010, ದಿನಾಂಕ : 30–04–2010ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಗೀತಾಕುಮಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಹಾಗೂ ಸಂಸ್ಕೃತಿ ಮತ್ತು ವಾರ್ತಾ ಇಲಾಖೆ

(ಆಡಳಿತ ಕನ್ನಡ)

**ಪಿ.ಆರ್. ನಂ. 1337**

## ಆರ್ಥಿಕ ಸಚಿವಾಲಯ

**ಸಂಖ್ಯೆ : ಆಇ 329 ವಾತೆಸಿ 2011, ಬೆಂಗಳೂರು, ದಿನಾಂಕ : 27–04–2012**

### ತಿದ್ದುಪಡಿ–1

ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ : ಆಇ 329 ವಾತೆಸಿ 2011, ದಿನಾಂಕ : 31–01–2012 ರಲ್ಲಿ ಶ್ರೀ ಬಿ.ಬಿ. ಬೆಣಚಮರಡಿ ಇವರ ನಿವೃತ್ತಿ "ದಿನಾಂಕ : 30–04–1956" ಎಂಬುದರ ಬದಲಾಗಿ "ದಿನಾಂಕ : 30–04–2016" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಆರ್. ಚಂದ್ರಶೇಖರಾರಾಧ್ಯ**

ಪೀಠಾಧಿಕಾರಿ,

ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2)

**ಪಿ.ಆರ್. ನಂ. 1338**

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಆರ್. ಕೊಟ್ರಪ್ಪ, ಮಾಜಿ ಪೊಲೀಸ್ ಕಾನ್ಸ್‌ಟೇಬಲ್, ವಿದ್ಯಾನಗರ ಪೊಲೀಸ್ ಠಾಣೆ, ದಾವಣಗೆರೆ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ–5/ಇವಿ/09/2008 (ಓ.ಬಿ. ಸಂಖ್ಯೆ: 09/2009) ದಿನಾಂಕ: 07–01–2009
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವವಲಯ, ದಾವಣಗೆರೆ ಇವರ ಹಿಂಬರಹ ಸಂಖ್ಯೆ: 05/ಸಿಬ್ಬಂದಿ–2/2010–11(ಓ.ಬಿ. ಸಂಖ್ಯೆ: 10/2010–11) ದಿನಾಂಕ: 16–04–2010
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 17–05–2011
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)15/2011–12 ದಿನಾಂಕ: 13–07–2011

**ಪ್ರಸ್ತಾವನೆ:**

ಶ್ರೀ ಆರ್. ಕೊಟ್ರಪ್ಪ, ಇವರು ದಾವಣಗೆರೆ ವಿದ್ಯಾನಗರ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಕಾನ್ಸ್‌ಟೇಬಲ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ, ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ತೋರಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

> "ವಿದ್ಯಾನಗರ ಪೊಲೀಸ್ ಠಾಣೆಯಲ್ಲಿ ದಿನಾಂಕ: 10–04–2007 ರಂದು ಠಾಣೆಯಿಂದ ಎಂ.ಹೆಚ್.ಎಸ್. ಪುಸ್ತಕ ಪಡೆದುಕೊಂಡು ಖಾಯಿಲೆ ರಜೆಯ ಮೇಲೆ ತೆರಳುತ್ತಿರುವುದಾಗಿ ತಿಳಿಸಿ ಹೋದವರು ಇಲ್ಲಿಯವರೆಗೂ ಮರಳಿ ಕರ್ತವ್ಯಕ್ಕೆ ಹಾಜರಾಗದೇ ಮತ್ತು ಮೇಲಾಧಿಕಾರಿಗಳಿಗೆ ನಿಮ್ಮ ಇರುವಿಕೆಯ ಬಗ್ಗೆ ಯಾವುದೇ ಮಾಹಿತಿಗಳನ್ನಾಗಲಿ ಅಥವಾ ರಜೆ ಅರ್ಜಿಯನ್ನಾಗಲಿ ಸಲ್ಲಿಸದೇ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯದಲ್ಲಿ ನಿರ್ಲಕ್ಷತನ ತೋರಿಸಿರುತ್ತೀರಿ."

ಆ.ಪೊ.ಅ. ರವರು ಇಲಾಖಾ ವಿಚಾರಣೆಗೆ ಹಾಜರಾಗದೆ ಸಮಜಾಯಿಷಿಯನ್ನು ನೀಡದೆ ಇದ್ದ ಕಾರಣ ವಿಚಾರಣಾಧಿಕಾರಿಗಳು ಸಾಕ್ಷ್ಯಾಧಾರ/ ದಾಖಲೆಗಳ ಆಧಾರದ ಮೇಲೆ ಏಕಪಕ್ಷೀಯವಾಗಿ ವಿಚಾರಣೆ ನಡೆಸಿ ಆರೋಪ ಸಾಬೀತಾಗಿದೆ ಎಂದು ವರದಿ ನೀಡಿರುತ್ತಾರೆ. ಸದರಿ ವರದಿಯನ್ವಯ ಶಿಸ್ತು ಪ್ರಾಧಿಕಾರವು ಕಾರಣ ಕೇಳುವ ನೋಟೀಸ್ ಜಾರಿಗೊಳಿಸಿದ್ದು, ಆ ಸಂದರ್ಭದಲ್ಲಿಯು ಸಹ ಅರ್ಜಿದಾರರು ಸಮಜಾಯಿಷಿಯನ್ನು ನೀಡಿರುವುದಿಲ್ಲ. ವಿಚಾರಣಾಧಿಕಾರಿಗಳ ವರದಿಯನ್ವಯ ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ ಇವರು ದಿ: 07–01–2009ರ ಆದೇಶದಲ್ಲಿ "ಇವರನ್ನು ಸೇವೆಯಿಂದ ವಜಾಗೊಳಿಸಲಾಗಿದೆ. ದಿನಾಂಕ: 10–04–2007 ರಿಂದ 05–01–2009 ರವರೆಗಿನ 635 ದಿನಗಳ ಅನಧಿಕೃತ ಗೈರುಹಾಜರಿಯ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮ 106(ಎ) ಪ್ರಕಾರ ವೇತನ ರಹಿತ ರಜೆ ಎಂದು ಪರಿಗಣಿಸಿದ್ದಾರೆ."

ಶಿಸ್ತು ಪ್ರಾಧಿಕಾರದ ದಂಡನಾದೇಶದ ವಿರುದ್ದ ಸಲ್ಲಿಸಿದ ಮೇಲ್ಮನವಿಯನ್ನು ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರು ಒಂದು ವರ್ಷಕ್ಕೂ ಅಧಿಕ ಅವಧಿಯ ನಂತರ ಮೇಲ್ಮನವಿಯನ್ನು ಸಲ್ಲಿಸಿದ ಹಿನ್ನೆಲೆಯಲ್ಲಿ ವಿಳಂಬಿತ ಮೇಲ್ಮನವಿಯೆಂದು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 16–04–2010ರ ಹಿಂಬರಹದಲ್ಲಿ ತಿರಸ್ಕರಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ, ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 49 ಪೊಸಿಅ 2011 ಬೆಂಗಳೂರು, ದಿನಾಂಕ: 08–5–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್. ಕೊಟ್ರಪ್ಪ, ಮಾಜಿ ಪೊಲೀಸ್ ಕಾನ್ಸ್‌ಟೇಬಲ್, ವಿದ್ಯಾನಗರ ಪೊಲೀಸ್ ಠಾಣೆ, ದಾವಣಗೆರೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ.ಆರ್. 1331**

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಬಿ. ಜಗನ್ನಾಥ ರೈ, ಪಿ.ಐ. ವಿಜಯನಗರ ಪೊಲೀಸ್ ಠಾಣೆ, ಬೆಂಗಳೂರು ನಗರ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ: ಡಿಇ(2)/ಸಿಓಪಿ/132/2009 ದಿನಾಂಕ: 29–12–2009
2) ಮೇಲ್ಮನವಿ ಪ್ರಾಧಿಕಾರ ಹಾಗೂ ಡೈರಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು ಇವರ ಆದೇಶ ಸಂಖ್ಯೆ: ಸಿಬಿ(8)/159/2009–10 ದಿನಾಂಕ: 22–6–2010
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 13–07–2010
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8) 159/2009–10 ದಿನಾಂಕ: 24–09–2010

**ಪ್ರಸ್ತಾವನೆ:**

ಶ್ರೀ ಬಿ. ಜಗನ್ನಾಥ ರೈ, ಪಿ.ಐ. ಇವರು ಬೆಂಗಳೂರಿನ ವಿಜಯನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ, ಬೇಜವಾಬ್ದಾರಿತನ ಮತ್ತು ಕರ್ತವ್ಯ ಲೋಪವೆಸಗಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಬಿ. ಜಗನ್ನಾಥ ರೈ, ಪಿ.ಐ. ವಿಜಯನಗರ ಪೊಲೀಸ್ ಠಾಣೆ, ಬೆಂಗಳೂರು ನಗರ ಆದ ನೀವು ನಿಮ್ಮ ಠಾಣಾ ವ್ಯಾಪ್ತಿಯ ಪ್ರಸ್ತುತ ಸಾಲಿನಲ್ಲಿ ಇದುವರೆಗೆ 7 ಸುಲಿಗೆ, 12 ಸರ ಅಪಹರಣ, 5 ಹಗಲು ಕನ್ನಕಳವು, 20 ರಾತ್ರಿ ಕನ್ನ ಕಳುವು, 31 ಮನೆ ಕಳವು, 192 ದ್ವಿಚಕ್ರ ವಾಹನ ಕಳುವು ಮತ್ತು 7 ನಾಲ್ಕು ಚಕ್ರ ವಾಹನಗಳ ಕಳವು ಪ್ರಕರಣಗಳು ವರದಿಯಾಗಿದ್ದು ಅವುಗಳಲ್ಲಿ ನೀವು 1 ಸುಲಿಗೆ, 1 ಸರ ಅಪಹರಣ, 6 ರಾತ್ರಿ ಕನ್ನ ಕಳುವು ಮತ್ತು 14 ದ್ವಿಚಕ್ರ ವಾಹನ ಕಳುವು ಪ್ರಕರಣಗಳನ್ನು ಮಾತ್ರ ಪತ್ತೆ ಮಾಡಿರುತ್ತೀರಿ. ಇದಲ್ಲದೆ ಪ್ರಸ್ತುತ ಸಾಲಿನಲ್ಲಿ ರೂ. 1,45,09,595/– ಗಳ ಸ್ವತ್ತು ಕಳವಾಗಿದ್ದು ಅದರಲ್ಲಿ ಕೇವಲ ರೂ. 8,20,050/– ಗಳ ಸ್ವತ್ತನ್ನು ಮಾತ್ರ ಪತ್ತೆ ಮಾಡಿರುತ್ತೀರಿ ಈ ಬಗ್ಗೆ ಜಂಟಿ ಪೊಲೀಸ್ ಕಮೀಷನರ್, ಅಪರಾಧ, ಬೆಂಗಳೂರು ನಗರ ರವರು ಅಪರಾದ ಪ್ರಕರಣಗಳನ್ನು ಅದರಲ್ಲೂ ವಿಶೇಷವಾಗಿ ಸರ ಅಪಹರಣ ಪ್ರಕರಣಗಳನ್ನು ತಡೆಯಲು ಮತ್ತು ಆರೋಪಿಗಳನ್ನು ಪತ್ತೆ ಮಾಡಲು ಅನೇಕ ಬಾರಿ ಸೂಚನೆಗಳನ್ನು ನೀಡಿದ್ದರೂ ಸಹ ಸರ ಅಪಹರಣ ಪ್ರಕರಣಗಳನ್ನು ತಡೆಯಲು ಮತ್ತು ಆರೋಪಿಗಳನ್ನು ಪತ್ತೆ ಮಾಡಲು ನೀವು ಯಾವುದೇ ಕ್ರಮ ಕೈಗೊಂಡಿರುವುದಿಲ್ಲ. ಈ ರೀತಿಯಾಗಿ ನೀವು ಒಬ್ಬ ಜವಾಬ್ದಾರಿಯುತ ಠಾಣಾಧಿಕಾರಿಯಾಗಿದ್ದು, ಠಾಣಾ ವ್ಯಾಪ್ತಿಯಲ್ಲಿ ನಡೆಯುತ್ತಿರುವ ಅಪರಾಧ ಪ್ರಕರಣಗಳನ್ನು ತಡೆಗಟ್ಟುವಲ್ಲಿ ಮತ್ತು ಆರೋಪಿಗಳನ್ನು ಪತ್ತೆ ಮಾಡಲು ಸಂಪೂರ್ಣವಾಗಿ ವಿಫಲರಾಗಿ ಸಾರ್ವಜನಿಕರಿಗೆ ಇಲಾಖೆಯ ಬಗ್ಗೆ ಅಪನಂಬಿಕೆ ಬರುವಂತೆ ಮಾಡಿ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ಬೇಜವಾಬ್ದಾರಿತನ ಮತ್ತು ಕರ್ತವ್ಯಲೋಪವೆಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 29–12–2009ರ ಆದೇಶದಲ್ಲಿ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ 2 ವರ್ಷ ಕಾಲ ಮುಂದೂಡುವ ದಂಡನೆಯನ್ನು ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೈರಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 22–06–2010 ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ, ಬೇಜವಾಬ್ದಾರಿತನ ಮತ್ತು ಕರ್ತವ್ಯ ಲೋಪವೆಸಗಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 120 ಪೊಸಿಅ 2010 ಬೆಂಗಳೂರು, ದಿನಾಂಕ: 08–5–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ. ಜಗನ್ನಾಥ ರೈ, ಪಿ.ಐ., ವಿಜಯನಗರ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

**ಪಿ.ಆರ್. 1332**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಕೆ. ಪುಟ್ಟಸ್ವಾಮಿ, ಎ.ಎಸ್.ಐ., ಸದಾಶಿವನಗರ ಸಂಚಾರ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಉಪ ಆರಕ್ಷಕ ಆಯುಕ್ತರು (ಕಾ.ಸು.) (ಪಶ್ಚಿಮ) ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ: 73/ಡಿಇ/ ಆರ್6/85 ದಿನಾಂಕ: 03–6–1986
2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 08–7–2009
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)31/2009–10 ದಿನಾಂಕ: 13–7–201

**ಪ್ರಸ್ತಾವನೆ:**

ಶ್ರೀ ಕೆ. ಪುಟ್ಟಸ್ವಾಮಿ, ಎ.ಎಸ್.ಐ., ಇವರು ಬೆಂಗಳೂರಿನ ಆರ್.ಎಂ.ಸಿ. ಯಾರ್ಡಿನಲ್ಲಿ ಪಿ.ಸಿ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅನಧಿಕೃತ ಗೈರುಹಾಜರಾಗಿ ಕರ್ತವ್ಯ ಲೋಪವೆಸಗಿ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ದ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ

**ದೋಷಾರೋಪಣೆ:–**

1. ಆರಕ್ಷಕ 5830, ಕೆ. ಪುಟ್ಟಸ್ವಾಮಿ, ಆರ್.ಎಂ.ಸಿ. ಯಾರ್ಡ್, ಆರಕ್ಷಕ ಠಾಣೆ, ಆದ ನೀವು ದಿನಾಂಕ: 23–8–83 ರಿಂದ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರುಹಾಜರಾಗಿ ಕರ್ತವ್ಯಲೋಪ ಮಾಡಿರುವುದು.

2. ಡೆಸರ್ಟರ್ ನೋಟೀಸ್ ಸಂಖ್ಯೆ: ಪನಸಿ 164/85 ದಿನಾಂಕ: 02–31985ನ್ನು ಸ್ವೀಕರಿಸಿದ್ದಾಗ್ಯೂ ಕರ್ತವ್ಯಕ್ಕೆ ಹಾಜರಾಗಿರದೆ ನಿರ್ಲಕ್ಷತೆ ಮತ್ತು ದುರ್ನಡತೆ ತೋರಿರುವುದು.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಉಪ ಆರಕ್ಷಕ ಆಯುಕ್ತರು (ಕಾ.ಸು.) (ಪಶ್ಚಿಮ) ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 03–6–1986ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಪಿ.ಸಿ. ಹುದ್ದೆಯ ಕನಿಷ್ಠ ಮಟ್ಟಕ್ಕೆ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಒಂದು ವರ್ಷಕಾಲ ತಗ್ಗಿಸಿ ಅನಧಿಕೃತವಾಗಿ ಗೈರುಹಾಜರಾದ ದಿನಾಂಕ: 23–8–83 ರಿಂದ 15–7–85 ರವರೆಗಿನ ಅವಧಿಯನ್ನು ಸಂಬಳ ರಹಿತ ರಜೆ ಎಂದು ತೀರ್ಮಾನಿಸಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಓದಲಾದ (3)ರ ಪತ್ರದೊಂದಿಗೆ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಒದಗಿಸಿದ್ದ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಅನಧಿಕೃತ ಗೈರುಹಾಜರಾಗಿ ಕರ್ತವ್ಯ ಲೋಪವೆಸಗಿ ದುರ್ನಡತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 143 ಪೊಸಿಅ 2009 ಬೆಂಗಳೂರು, ದಿನಾಂಕ: 04–5–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ. ಪುಟ್ಟಸ್ವಾಮಿ, ಎ.ಎಸ್.ಐ., ಸದಾಶಿವನಗರ ಸಂಚಾರ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

**ಪಿ.ಆರ್. 1335**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)